ಮತ್ತು (i) ನೇ ಖಂಡ ಅಥವಾ (ii) ನೇ ಖಂಡದಲ್ಲಿ ಉಲ್ಲೇಖಿಸಿರುವ ಪ್ರತಿಯೊಂದು ಅಪರಾಧವನ್ನು, ಆ ಅಧ್ಯಾಯದ ಉಪಬಂಧಗಳನ್ನು ಅಧಿನಿಯಮಿತಿಗೊಳಿಸಿರದಿದ್ದರೆ ಹೇಗೋ ಹಾಗೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ನ್ಯಾಯಾಲಯವು ಸಂಜ್ಞಾನಕ್ಕೆ ತೆಗೆದುಕೊಳ್ಳಬಹುದು.

**ಅನುಸೂಚಿ**

**(2ನೇ ಪ್ರಕರಣವನ್ನು ನೋಡಿ)**

1. ಮೈಸೂರು ಲಾಟರಿಗಳ ಮತ್ತು ಬಹುಮಾನ ಸ್ಪರ್ಧೆಗಳ (ನಿಯಂತ್ರಣ ಮತ್ತು ತೆರಿಗೆ) ಅಧಿನಿಯಮ, 1951 (1951ರ ಮೈಸೂರು ಅಧಿನಿಯಮ 27);
2. ಮೈಸೂರು ಜೂಜು ತೆರಿಗೆ ಅಧಿನಿಯಮ, 1932 (1932ರ ಮೈಸೂರು ಅಧಿನಿಯಮ 9);
3. ಕರ್ನಾಟಕ ಕೃಷಿ ಆದಾಯ ತೆರಿಗೆ ಅಧಿನಿಯಮ, 1957 (1957ರ ಕರ್ನಾಟಕ ಅಧಿನಿಯಮ 22);
4. ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957 (1957ರ ಕರ್ನಾಟಕ ಅಧಿನಿಯಮ 25);
5. ಕರ್ನಾಟಕ ಮೋಟಾರು ವಾಹನಗಳ ತೆರಿಗೆ ನಿರ್ಧರಣೆ ಅಧಿನಿಯಮ, 1957 (1957ರ ಕರ್ನಾಟಕ ಅಧಿನಿಯಮ 35);
6. ಕರ್ನಾಟಕ ಮನರಂಜನಾ ತೆರಿಗೆ ಅಧಿನಿಯಮ, 1958 (1958ರ ಕರ್ನಾಟಕ ಅಧಿನಿಯಮ 30);
7. ವಿದ್ಯುಚ್ಛಕ್ತಿ (ಬಳಕೆ ಮೇಲೆ ತೆರಿಗೆ ನಿರ್ಧರಣೆ) ಅಧಿನಿಯಮ, 1959 (1959ರ ಕರ್ನಾಟಕ ಅಧಿನಿಯಮ 14);
8. ಕರ್ನಾಟಕ ಅಬ್ಕಾರಿ ಅಧಿನಿಯಮ, 1965 (1966ರ ಕರ್ನಾಟಕ ಅಧಿನಿಯಮ 21);
9. ಕರ್ನಾಟಕ ವೃತ್ತಿಗಳ, ವ್ಯಾಪಾರಗಳ, ಆಜೀವಿಕೆಗಳ ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮ, 1976 (1976ರ ಕರ್ನಾಟಕ ಅಧಿನಿಯಮ 35); ಮತ್ತು
10. ಕರ್ನಾಟಕ ಸ್ಥಳೀಯ ಪ್ರದೇಶಗಳೊಳಗೆ ಬಳಕೆ, ಉಪಯೋಗ ಅಥವಾ ಮಾರಾಟಕ್ಕಾಗಿ ಬರುವ ಸರಕುಗಳ ಮೇಲಣ ತೆರಿಗೆ ಅಧಿನಿಯಮ, 1979 (1979ರ ಕರ್ನಾಟಕ ಅಧಿನಿಯಮ 27).

The above translation of the Karnataka Economic Offences (Inapplicability of Limitation) Act, 1981 (10 of 1982) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್. 821

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 16 ರಾಶಾಪ್ರ 2006, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2006**

ಮಿಥಿಕ್ ಸೊಸೈಟಿ (ವಿಸರ್ಜನೆ ಮತ್ತು ವ್ಯವಸ್ಥಾಪನೆ) ಅಧಿನಿಯಮ, 1976ರ (1976ರ 20) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಮಿಥಿಕ್ ಸೊಸೈಟಿ (ವಿಸರ್ಜನೆ ಮತ್ತು ವ್ಯವಸ್ಥಾಪನೆ) ಅಧಿನಿಯಮ, 1976**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**1976ರ ಅಧಿನಿಯಮ 20.–** ಬೆಂಗಳೂರಿನ ಮಿಥಿಕ್ ಸಂಸ್ಥೆಯು, ಸಂಘಗಳ ನೋಂದಣಿ ಅಧಿನಿಯಮದ ಅಡಿಯಲ್ಲಿ ನೋಂದಾಯಿತವಾದ ಒಂದು ಸಂಸ್ಥೆ, ಇದು 1909ರಲ್ಲಿ ಸ್ಥಾಪಿತವಾಯಿತು. ಇದನ್ನು ಕರ್ನಾಟಕ ರಾಜ್ಯದಲ್ಲಿ, ಭಾರತೀಯ ಪುರಾತತ್ವ ಶಾಸ್ತ್ರ, ಪ್ರಾಚ್ಯ ವಸ್ತು ಶಾಸ್ತ್ರ, ಮಾನವ ಶಾಸ್ತ್ರ, ವಾಸ್ತು ಶಿಲ್ಪ ಶಾಸ್ತ್ರ, ಕಲೆ, ಜನಾಂಗ ಶಾಸ್ತ್ರ ಮತ್ತು ಇತರ ಸಂಬಂಧಿತ ವಿಷಯಗಳಲ್ಲಿ ಅಧ್ಯಯನ ಮತ್ತು ಸಂಶೋಧನೆಯನ್ನು ಉತ್ತೇಜಿಸಲು ಸ್ಥಾಪಿಸಲಾಗಿತ್ತು. ಈ ಸಂಸ್ಥೆಯು ತನ್ನ ಉದ್ದೇಶಗಳನ್ನು ಸಾಧಿಸಲು ಅಧಿಕ ಮೌಲ್ಯದ ಅಪರೂಪದ ಅಮೂಲ್ಯವಾದ ಹಸ್ತಪ್ರತಿಗಳು ಮತ್ತು ಸಾಹಿತ್ಯ ಕೃತಿಗಳಿರುವ ಸಂಸ್ಥೆ ಒಂದು ಉತ್ತಮ ಗ್ರಂಥಾಲಯವನ್ನು ಹೊಂದಿದೆ. ಸಂಸ್ಥೆಯ ಸದಸ್ಯರು ಮತ್ತು ಮೇಲೆ ಹೇಳಿದ ವಿಷಯಗಳಲ್ಲಿ ಆಸಕ್ತಿ ಹೊಂದಿರುವ ಸಾರ್ವಜನಿಕರು ಇವುಗಳ ಉಪಯೋಗ ಪಡೆದಿದ್ದಾರೆ. ಪದಾಧಿಕಾರಿಗಳೂ ಅಥವಾ ಅನ್ಯಥಾ ಸಂಸ್ಥೆಯೊಂದಿಗೆ ಸಹವರ್ತಿಗಳಾಗಿದ್ದ ಸುಪ್ರಸಿದ್ಧ ವ್ಯಕ್ತಿಗಳ ಪೈಕಿ ಡಾ. ಮೋರಿಸ್ ತ್ರವರ್ಸ್, ರೆ.ಫಾ. ಎ.ಎಂ. ತಬರ್ಡ್, ರಾವ್ ಬಹದ್ದೂರ್ ಎಂ. ಶಾಮರಾವ್, ದಿವಾನ್ ಸರ್ ಮಿರ್ಜಾ ಇಸ್ಮಾಯಿಲ್, ದಿವಾನ್ ಶ್ರೀ. ಎನ್. ಮಾಧವರಾವ್, ಶ್ರೀ ಸಿ.ವಿ. ರಾಮನ್, ಡಾ.ಎ.ರಾಮಸ್ವಾಮಿ ಮೊದಲಿಯಾರ್, ಪ್ರೊ.ಎ.ಆರ್.ವಾಡಿಯ ಮತ್ತು ಸರ್. ಎಂ. ವಿಶ್ವೇಶ್ವರಯ್ಯ ಮೊದಲಾದವರು ಇದ್ದಾರೆ. 1916ರ ಜನವರಿಯಲ್ಲಿ ಸಂಸ್ಥೆಗೆ ಒಂದು ಉಚಿತ ನಿವೇಶನವನ್ನು ಕೆಲವು ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲಾಯಿತು. ಅದೇ ಸಮಯದಲ್ಲಿ ಸಂಸ್ಥೆಯ ಕಟ್ಟಡದ ನಿರ್ಮಾಣಕ್ಕಾಗಿ 10,000 ರೂ.ಗಳ ರಾಜ್ಯ ಅನುದಾನವನ್ನು ಸಹ ನೀಡಲಾಯಿತು. ಈಗ ಇರುವ ಸಂಸ್ಥೆಯ ಕಟ್ಟಡವು ಆ ಅನುದಾನದಿಂದ ನಿರ್ಮಾಣವಾಗಿದೆ.

ಇತ್ತೀಚೆಗೆ ಸಂಸ್ಥೆಯ ವ್ಯವಸ್ಥಾಪನೆಯು ಅಸ್ತವ್ಯಸ್ತಗೊಂಡಿತು. ರಾಜ್ಯ ಸರ್ಕಾರವು ಮಂಜೂರು ಮಾಡಿದ ಭೂಮಿಯ ಕೆಲ ಭಾಗಗಳನ್ನು ಸಂಸ್ಥೆಗೆ ಸಂಬಂಧಪಡದ ಉದ್ದೇಶಗಳಿಗಾಗಿ ಇತರರಿಗೆ ಪರಭಾರೆ ಮಾಡಲಾಯಿತು. ಅಪರೂಪದ ಸಂಗ್ರಹಗಳ ಸುರಕ್ಷತೆಯು ಸಹ ಅಪಾಯಕ್ಕೆ ಒಳಗಾಯಿತು. ಸಂಸ್ಥೆಯ ಮೂಲ ಉದ್ದೇಶಗಳು ಮೂಲೆಗುಂಪಾದವು. ಇಂಥ ಚಟುವಟಿಕೆಗಳನ್ನು ತಡೆಗಟ್ಟದಿದ್ದಲ್ಲಿ ಯಾವ ವಿಷಯಗಳನ್ನು ಉತ್ತೇಜಿಸಲು ಸಾರ್ವಜನಿಕ ಹಿತದೃಷ್ಟಿಯಿಂದ ಸಂಸ್ಥೆಯನ್ನು ಸ್ಥಾಪಿಸಲಾಗಿತ್ತೋ ಆ ಹಿತಾಸಕ್ತಿಯು ವಿಪತ್ತಿಗೆ ಒಳಗಾಗುವ ಸಂಭವವಿತ್ತು. ವಿಷಯವು ತುರ್ತು ಸ್ವರೂಪದ್ದಾಗಿದ್ದುದರಿಂದ ಮತ್ತು ರಾಜ್ಯ ವಿಧಾನ ಮಂಡಲವು ಅಧಿವೇಶನದಲ್ಲಿಲ್ಲದಿದ್ದುದರಿಂದ ಮಿಥಿಕ್ ಸೊಸೈಟಿ (ವಿಸರ್ಜನೆ ಮತ್ತು ವ್ಯವಸ್ಥಾಪನೆ) ಅಧ್ಯಾದೇಶ, 1975ನ್ನು ಪ್ರಖ್ಯಾಪಿಸಲಾಯಿತು.

ಸದರಿ ಅಧ್ಯಾದೇಶದ ಬದಲಾಗಿ ಈ ವಿಧೇಯಕವನ್ನು ಮಂಡಿಸಿದೆ.

(1976ರ ವಿ.ಪ ವಿಧೇಯಕ ಸಂಖ್ಯೆ 4 ರಿಂದ ಪಡೆಯಲಾಗಿದೆ. ಅಧಿಸೂಚನೆ ಸಂಖ್ಯೆ 11195/ವಿ.ಪ ದಿನಾಂಕ 24.8.1976 ಎಂದು ಪ್ರಕಟವಾಗಿದೆ.)

## 1976ರ ಕರ್ನಾಟಕ ಅಧಿನಿಯಮ ಸಂಖ್ಯೆ 20

*(1976ರ ಮಾರ್ಚ್ ಹನ್ನೊಂದನೇ ದಿನದಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಮೊದಲು ಪ್ರಕಟಿಸಲಾಗಿದೆ)*

## ಮಿಥಿಕ್ ಸೊಸೈಟಿ (ವಿಸರ್ಜನೆ ಮತ್ತು ವ್ಯವಸ್ಥಾಪನೆ) ಅಧಿನಿಯಮ, 1976

*(1976 ರ ಮಾರ್ಚ್ ಎಂಟನೇ ದಿನದಂದು ರಾಜ್ಯಪಾಲರ ಅನುಮೋದನೆ ಪಡೆದಿದೆ.)*

**ಮಿಥಿಕ್ ಸೊಸೈಟಿಯನ್ನು ವಿಸರ್ಜಿಸುವ ಮತ್ತು ಅದರ ವ್ಯವಸ್ಥಾಪನೆಗೆ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.**

ಮಿಥಿಕ್ ಸೊಸೈಟಿಯು, ಕರ್ನಾಟಕ ರಾಜ್ಯದಲ್ಲಿ ಮಾನವ ಶಾಸ್ತ್ರ, ಪ್ರಾಚ್ಯ ವಸ್ತು ಶಾಸ್ತ್ರ, ವಾಸ್ತುಶಿಲ್ಪ, ಕಲೆ, ಜನಾಂಗ ಶಾಸ್ತ್ರ, ಜಾನಪದ, ಇತಿಹಾಸ, ಪುರಾಣ ಶಾಸ್ತ್ರ, ತತ್ವಶಾಸ್ತ್ರ, ಧರ್ಮ ಮತ್ತು ಇತರ ಸಂಬಂಧಿತ ವಿಷಯಗಳಲ್ಲಿ ಅಧ್ಯಯನವನ್ನು ಸಂವರ್ಧಿಸುವ ಮತ್ತು ಸಂಶೋಧನೆಯನ್ನು ಉತ್ತೇಜಿಸುವ ಉದ್ದೇಶಗಳನ್ನು ಹೊಂದಿದ್ದು, ಅದು ಸಂಘಗಳ ನೋಂದಣಿ ಅಧಿನಿಯಮದ ಅಡಿಯಲ್ಲಿ ನೋಂದಾಯಿತವಾದ ಒಂದು ಸಂಸ್ಥೆಯಾಗಿರುವುದರಿಂದ;

ಸದರಿ ಸಂಸ್ಥೆಯ ಗ್ರಂಥಾಲಯದಲ್ಲಿ ಮೇಲೆ ಹೇಳಲಾದ ವಿಷಯಗಳಿಗೆ ಸಂಬಂಧಿಸಿದಂತೆ ಅಪರೂಪದ ಮತ್ತು ಅಮೂಲ್ಯ ಹಸ್ತಪ್ರತಿಗಳು ಮತ್ತು ಗ್ರಂಥ ಸಂಪುಟಗಳು ಇರುವುದರಿಂದ;

ರಾಜ್ಯ ಸರ್ಕಾರವು ಸದರಿ ಸಂಸ್ಥೆಗೆ ಬೆಂಗಳೂರು ನಗರದ ನೃಪತುಂಗ ರಸ್ತೆಯಲ್ಲಿ ಬೆಲೆಬಾಳುವ ಒಂದು ನಿವೇಶನವನ್ನು ಉಚಿತವಾಗಿ ಮತ್ತು ಕಟ್ಟಡದ ನಿರ್ಮಾಣಕ್ಕಾಗಿ, ಪೀಠೋಪಕರಣಗಳ ಖರೀದಿ ಮತ್ತು ಇತರ ಉದ್ದೇಶಗಳಿಗಾಗಿ ಕಾಲಕಾಲಕ್ಕೆ ಆರ್ಥಿಕ ನೆರವನ್ನು ಸಹ ಮಂಜೂರು ಮಾಡಿರುವುದರಿಂದ;

ಸದರಿ ಸಂಸ್ಥೆಯ ವ್ಯವಹಾರಗಳನ್ನು ಅದರ ಉತ್ತಮ ಹಿತದೃಷ್ಟಿಯಲ್ಲಿ ನಿರ್ವಹಿಸದಿರುವುದರಿಂದ ಮತ್ತು ಸಂಸ್ಥೆಯ ಉದ್ದೇಶಗಳು ಆ ಮೂಲಕ ಬಾಧಿತವಾಗಿರುವುದರಿಂದ;

ಸದರಿ ಉದ್ದೇಶಗಳನ್ನು ಕಾರ್ಯಗತಗೊಳಿಸಲು ಸದರಿ ಸೊಸೈಟಿಯನ್ನು ವಿಸರ್ಜಿಸಿ ಮತ್ತು ಈ ಉದ್ದೇಶಕ್ಕಾಗಿ ಒಂದು ಮಂಡಲಿಯನ್ನು ಸ್ಥಾಪಿಸಲು ಉಪಬಂಧ ಕಲ್ಪಿಸುವುದು ಅಗತ್ಯವಾಗಿರುವುದರಿಂದ;

ಭಾರತ ಗಣರಾಜ್ಯದ ಇಪ್ಪತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಇದು ಅಧಿನಿಯಮಿತವಾಗತಕ್ಕದ್ದು:–

1. **ಚಿಕ್ಕ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು, ಮಿಥಿಕ್ ಸೊಸೈಟಿ (ವಿಸರ್ಜನೆ ಮತ್ತು ವ್ಯವಸ್ಥಾಪನೆ) ಅಧಿನಿಯಮ, 1976 ಎಂದು ಕರೆಯತಕ್ಕದ್ದು.

(2) ಇದು, 1975ರ ನವೆಂಬರ್ ಮೂರನೇ ದಿನದಂದು ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

2. **ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) ' ಗೊತ್ತುಪಡಿಸಲಾದ ದಿನ ' ಎಂದರೆ, ಈ ಅಧಿನಿಯಮದ ಪ್ರಾರಂಭದ ದಿನಾಂಕ ;

(ಬಿ) ' ಮಂಡಲಿ ' ಎಂದರೆ, ಮಿಥಿಕ್ ಸೊಸೈಟಿಯ ವ್ಯವಸ್ಥಾಪನಾ ಮಂಡಲಿ;

(ಸಿ) ' ಅಧ್ಯಕ್ಷ ' ಎಂದರೆ, ಮಂಡಲಿಯ ಅಧ್ಯಕ್ಷ;

(ಡಿ) ' ಸದಸ್ಯ ' ಎಂದರೆ, ಮಂಡಲಿಯ ಸದಸ್ಯ;

(ಇ) ' ಕಾರ್ಯದರ್ಶಿ' ಎಂದರೆ, ಮಂಡಲಿಯ ಕಾರ್ಯದರ್ಶಿ;

(ಎಫ್) ' ಸಂಸ್ಥೆ ' ಎಂದರೆ, ಕರ್ನಾಟಕ ಸಂಘಗಳ ನೋದಣಿ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ 17) ಅಡಿಯಲ್ಲಿ ನೋಂದಾಯಿತವಾದುದೆಂದು ಭಾವಿಸಲಾದ ಹಾಗೂ ನೃಪತುಂಗ ರಸ್ತೆ, ಬೆಂಗಳೂರು–2 ಇಲ್ಲಿ ತನ್ನ ಪ್ರಧಾನ ಕಚೇರಿಯನ್ನು ಹೊಂದಿರುವ ಮಿಥಿಕ್ ಸೊಸೈಟಿ ಎಂಬ ಸಂಸ್ಥೆ.

3. **ಮಂಡಲಿಯ ಸ್ಥಾಪನೆ ಮತ್ತು ನಿಗಮನ.–** (1) ರಾಜ್ಯ ಸರ್ಕಾರವು, ರಾಜ್ಯ ಪತ್ರದಲ್ಲಿ ಅಧಿಸೂಚನೆ ಹೊರಡಿಸುವ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರುವಂತೆ, ಈ ಅಧಿನಿಯಮದ ಉದ್ದೇಶಗಳಿಗಾಗಿ, ಮಿಥಿಕ್ ಸೊಸೈಟಿಯ ವ್ಯವಸ್ಥಾಪನಾ ಮಂಡಲಿ ಎಂದು ಕರೆಯಲಾಗುವ ಒಂದು ಮಂಡಲಿಯನ್ನು ಸ್ಥಾಪಿಸತಕ್ಕದ್ದು.

(2) ಆ ಮಂಡಲಿಯು, ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಸ್ವತ್ತುಗಳನ್ನು ಆರ್ಜಿಸುವ, ಧಾರಣ ಮಾಡುವ ಮತ್ತು ವಿಲೇ ಮಾಡುವ ಮತ್ತು ಒಪ್ಪಂದ ಮಾಡಿಕೊಳ್ಳುವ ಅಧಿಕಾರದೊಂದಿಗೆ ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಅದು, ಆ ಹೆಸರಿನಿಂದ ದಾವೆ ಹೂಡಬಹುದು ಅಥವಾ ದಾವೆಗೆ ಗುರಿಯಾಗಬಹುದು.

(3) (2)ನೇ ಉಪ ಪ್ರಕರಣದಲ್ಲಿ ಏನೇ ಇದ್ದರೂ, ಮಂಡಲಿಯು, ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆಯದೆ ತನಗೆ ಸೇರಿದ ಯಾವುದೇ ಸ್ವತ್ತನ್ನು ಮಾರಾಟ ಮಾಡತಕ್ಕದ್ದಲ್ಲ ಅಥವಾ ಅನ್ಯಥಾ ವಿಲೇ ಮಾಡತಕ್ಕದ್ದಲ್ಲ.

4. **ಮಂಡಲಿಯ ರಚನೆ.–** (1) ರಾಜ್ಯ ಸರ್ಕಾರವು ನೇಮಕ ಮಾಡುವ ಹನ್ನೊಂದಕ್ಕಿಂತ ಹೆಚ್ಚಲ್ಲದಷ್ಟು ಸದಸ್ಯರನ್ನು ಮಂಡಲಿಯು ಒಳಗೊಂಡಿರತಕ್ಕದ್ದು, ಅವರ ಪೈಕಿ ಮೂವರಿಗಿಂತ ಕಡಿಮೆ ಇಲ್ಲದಷ್ಟು ಸದಸ್ಯರು ಮಾನವ ಶಾಸ್ತ್ರ, ಪ್ರಾಚ್ಯ ವಸ್ತು ಶಾಸ್ತ್ರ, ವಾಸ್ತು ಶಿಲ್ಪ ಶಾಸ್ತ್ರ, ಕಲೆ, ಜನಾಂಗಶಾಸ್ತ್ರ, ಜಾನಪದ, ಇತಿಹಾಸ, ಪುರಾಣ ಶಾಸ್ತ್ರ, ತತ್ವ ಶಾಸ್ತ್ರ ಅಥವಾ ಧರ್ಮದ ವಿಷಯದಲ್ಲಿ ವಿಶೇಷ ಜ್ಞಾನ ಹೊಂದಿದವರಾಗಿರತಕ್ಕದ್ದು.

(2) ರಾಜ್ಯ ಸರ್ಕಾರವು, ಮಂಡಲಿಯ ಸದಸ್ಯರ ಪೈಕಿ ಒಬ್ಬನನ್ನು ಅಧ್ಯಕ್ಷನನ್ನಾಗಿ ನೇಮಕ ಮಾಡತಕ್ಕದ್ದು.

(3) ಅಧ್ಯಕ್ಷನು, ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು ಒಬ್ಬ ವ್ಯಕ್ತಿಯನ್ನು ಕಾರ್ಯದರ್ಶಿಯನ್ನಾಗಿ ನೇಮಕ ಮಾಡತಕ್ಕದ್ದು.

5. **ಸದಸ್ಯನು ಪದಕ್ಕೆ ರಾಜೀನಾಮೆ ನೀಡುವುದು.–** ಮಂಡಲಿಯ ಒಬ್ಬ ಸದಸ್ಯನು, ರಾಜ್ಯ ಸರ್ಕಾರಕ್ಕೆ ಸೂಚನೆ ನೀಡಿ ತನ್ನ ಪದಕ್ಕೆ ರಾಜೀನಾಮೆ ಸಲ್ಲಿಸಬಹುದು.

6. **ಪದಾವಧಿ ಮತ್ತು ಆಕಸ್ಮಿಕ ಖಾಲಿಸ್ಥಾನ.–** (1) ಪ್ರತಿಯೊಬ್ಬ ಸದಸ್ಯನು, ಮೂರು ವರ್ಷಗಳ ಅವಧಿಯವರೆಗೆ ಪದವನ್ನು ಧಾರಣ ಮಾಡತಕ್ಕದ್ದು.

(2) ಒಬ್ಬ ಸದಸ್ಯನ ಪದದಲ್ಲಿ ಉಂಟಾದ ಆಕಸ್ಮಿಕ ಖಾಲಿ ಸ್ಥಾನವನ್ನು, ರಾಜ್ಯ ಸರ್ಕಾರವು ಹೊಸದಾಗಿ ನಾಮನಿರ್ದೇಶನ ಮಾಡುವ ಮೂಲಕ ಭರ್ತಿ ಮಾಡತಕ್ಕದ್ದು ಮತ್ತು ಹಾಗೆ ನಾಮನಿರ್ದೇಶಿತನಾದ ಹೊಸ ಸದಸ್ಯನು, ತಾನು ಯಾವ ಸದಸ್ಯನ ಸ್ಥಾನದಲ್ಲಿ ನಾಮ ನಿರ್ದೇಶಿತನಾಗಿ ಭರ್ತಿಯಾಗಿರುವನೋ ಆ ಸದಸ್ಯನ ಉಳಿದ ಅವಧಿಯವರೆಗೆ ಮಾತ್ರ ಪದ ಧಾರಣ ಮಾಡತಕ್ಕದ್ದು.

7. **ಮಂಡಲಿಯ ಅಧಿಕಾರಗಳು.–** ಮಂಡಲಿಯು, ಈ ಮುಂದಿನ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಈ ಮುಂದಿನ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ: –

(ಎ) ಮಾನವ ಶಾಸ್ತ್ರ, ಪ್ರಾಚ್ಯ ವಸ್ತು ಶಾಸ್ತ್ರ, ವಾಸ್ತು ಶಿಲ್ಪ ಶಾಸ್ತ್ರ, ಕಲೆ, ಜನಾಂಗ ಶಾಸ್ತ್ರ, ಜಾನಪದ, ಇತಿಹಾಸ, ಪುರಾಣ ಶಾಸ್ತ್ರ, ತತ್ವ ಶಾಸ್ತ್ರ, ಧರ್ಮ ಮತ್ತು ಇತರ ಸಂಬಂಧಿತ ವಿಷಯಗಳ ಅಧ್ಯಯನವನ್ನು ಸಂವರ್ಧಿಸುವ ದೃಷ್ಟಿಯಿಂದ ಬೆಂಗಳೂರಿನ ಮಿಥಿಕ್ ಸೊಸೈಟಿಯನ್ನು ನಿರ್ವಹಿಸುವುದು ಮತ್ತು ವ್ಯವಸ್ಥಾಪನೆ ಮಾಡುವುದು;

(ಬಿ) ಮೇಲೆ ಹೇಳಲಾದ ವಿಷಯಗಳ ಅಧ್ಯಯನಗಳು ಮತ್ತು ಸಂಶೋಧನೆಗಾಗಿ ಉಪಬಂಧ ಕಲ್ಪಿಸುವುದು;

(ಸಿ) (ಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ಅನುವು ಮಾಡಿಕೊಡುವ ದೃಷ್ಟಿಯಿಂದ ಪುಸ್ತಕಗಳನ್ನು ಸಿದ್ಧಪಡಿಸಲು ಮತ್ತು ಪ್ರಕಟಿಸಲು ನೆರವಾಗುವುದು;

(ಡಿ) ಸರ್ಕಾರದಿಂದ ಕೊಡುಗೆಗಳು, ದೇಣಿಗೆಗಳು ಅಥವಾ ಉಪಕಾರ ಧನಗಳನ್ನು ಸ್ವೀಕರಿಸುವುದು ಮತ್ತು ಸಂದರ್ಭಾನುಸಾರ, ನ್ಯಾಸಧಾರಿಗಳು, ದೇಣಿಗೆದಾರರು, ವರ್ಗಾವಣೆದಾರರಿಂದ ಮರಣ ಶಾಸನದಾನವನ್ನು, ದೇಣಿಗೆಗಳನ್ನು ಮತ್ತು ಚರ ಹಾಗೂ ಸ್ಥಿರ ಸ್ವತ್ತುಗಳನ್ನು ವರ್ಗಾವಣೆ ಪಡೆಯುವುದು ;

(ಇ) ಮಂಡಲಿಯು, (ಎ) ಯಿಂದ (ಡಿ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಗಳನ್ನು ಸಾಧಿಸಲು ತಾನು ಸೂಕ್ತವೆಂದು ಭಾವಿಸುವಂಥ ರೀತಿಯಲ್ಲಿ ಮಂಡಲಿಗೆ ಸೇರಿದ ಅಥವಾ ಅದರಲ್ಲಿ ನಿಹಿತವಾದ ಯಾವುದೇ ಸ್ವತ್ತಿನ ಸಂಬಂಧದಲ್ಲಿ ವ್ಯವಹರಿಸುವುದು;

(ಎಫ್) (ಎ) ಯಿಂದ (ಇ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ಎಲ್ಲ ಉದ್ದೇಶಗಳನ್ನು ಅಥವಾ ಯಾವುದೇ ಉದ್ದೇಶವನ್ನು ಸಾಧಿಸಲು ಅವಶ್ಯ ಅಥವಾ ಪ್ರಾಸಂಗಿಕ ಅಥವಾ ಅನುಕೂಲಕರವಾಗಬಹುದಾದಂಥ ಎಲ್ಲ ಕಾರ್ಯಗಳನ್ನು ಮಾಡುವುದು.

8. **ಸಂಸ್ಥೆಯ ವಿಸರ್ಜನೆ ಮತ್ತು ಸ್ವತ್ತಿನ ವರ್ಗಾವಣೆ.–** (1) ಬೆಂಗಳೂರಿನ ಮಿಥಿಕ್ ಸೊಸೈಟಿಯನ್ನು ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960ರ (1960ರ ಕರ್ನಾಟಕ ಅಧಿನಿಯಮ ಸಂಖ್ಯೆ 17) ಅಡಿಯಲ್ಲಿ ನೋಂದಾಯಿಸಲಾಗಿದೆಯೆಂದು ಭಾವಿಸಲಾಗಿದ್ದು, ಆ ಸಂಸ್ಥೆಯು ಗೊತ್ತುಪಡಿಸಲಾದ ದಿನದಿಂದ ವಿಸರ್ಜನೆಯಾಗತಕ್ಕದ್ದು ಮತ್ತು ಗೊತ್ತುಪಡಿಸಲಾದ ದಿನಕ್ಕೆ ನಿಕಟ ಪೂರ್ವದಲ್ಲಿ ಸಂಸ್ಥೆಗೆ ಸೇರಿದ್ದ ಅಥವಾ ಸಂಸ್ಥೆಯಲ್ಲಿ ನಿಹಿತವಾಗಿದ್ದ ಎಲ್ಲ ಸ್ಥಿರ ಮತ್ತು ಚರ ಸ್ವತ್ತುಗಳು ಹಾಗೂ ಎಲ್ಲ ಹಕ್ಕುಗಳು, ಅಧಿಕಾರಗಳು ಮತ್ತು ವಿಶೇಷಾಧಿಕಾರಗಳು ಮಂಡಲಿಯಲ್ಲಿ ನಿಹಿತವಾಗತಕ್ಕದ್ದು. ಮತ್ತು ಯಾವ ಉದ್ದೇಶಗಳಿಗಾಗಿ ಮಂಡಲಿಯನ್ನು ರಚಿಸಲಾಗಿತ್ತೋ ಆ ಉದ್ದೇಶಗಳಿಗಾಗಿ ಅವುಗಳನ್ನು ಅನ್ವಯಿಸತಕ್ಕದ್ದು.

(2) ಗೊತ್ತುಪಡಿಸಲಾದ ದಿನದಿಂದ ಸದರಿ ಸಂಸ್ಥೆಯ ಎಲ್ಲ ಋಣಗಳು ಮತ್ತು ಹೊಣೆಗಾರಿಕೆಗಳು ಮಂಡಲಿಗೆ ವರ್ಗಾವಣೆಗೊಳ್ಳತಕ್ಕದ್ದು ಮತ್ತು ಆ ತರುವಾಯ ಮಂಡಲಿಯು ಋಣಗಳನ್ನು ತೀರಿಸತಕ್ಕದ್ದು ಮತ್ತು ಹೊಣೆಗಾರಿಕೆಗಳನ್ನು ಪೂರೈಸತಕ್ಕದ್ದು.

(3) ಯಾವುವೇ ಮರಣ ಶಾಸನ ದಾನ, ಕೊಡುಗೆಗಳು ಅಥವಾ ನ್ಯಾಸಗಳನ್ನು ಒಳಗೊಂಡಿರುವಂಥ ಮತ್ತು ಈ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮುಂಚೆ ಅಥವಾ ತರುವಾಯ ಸದರಿ ಸಂಸ್ಥೆಯ ಹೆಸರಿಗೆ ಮಾಡಿದ ಅಥವಾ ಬರೆದುಕೊಟ್ಟ ಯಾವುದೇ ಉಯಿಲು, ಬಂಧಪತ್ರ ಅಥವಾ ಇತರ ದಸ್ತಾವೇಜನ್ನು ಗೊತ್ತುಪಡಿಸಲಾದ ದಿನದಿಂದ, ಸದರಿ ಸಂಸ್ಥೆಯ ಬದಲಾಗಿ ಅದರಲ್ಲಿ ಮಂಡಲಿಯನ್ನು ಹೆಸರಿಸಿದ್ದಿದ್ದರೆ ಹೇಗೋ ಹಾಗೆ ಅರ್ಥೈಸತಕ್ಕದ್ದು.

(4) ಯಾರೇ ವ್ಯಕ್ತಿಯು, ಗೊತ್ತುಪಡಿಸಲಾದ ದಿನಾಂಕದಂದು ಮಂಡಲಿಯಲ್ಲಿ ನಿಹಿತವಾಗಿರುವ ಯಾವುದೇ ಸ್ವತ್ತನ್ನು ಮತ್ತು ಅದಕ್ಕೆ ಸಂಬಂಧಿಸಿದ ಯಾವುದೇ ದಸ್ತಾವೇಜನ್ನು ತನ್ನ ಸ್ವಾಧೀನದಲ್ಲಿ ಅಥವಾ ಅಭಿರಕ್ಷೆಯಲ್ಲಿ ಅಥವಾ ತನ್ನ ನಿಯಂತ್ರಣದಲ್ಲಿಟ್ಟುಕೊಂಡಿದ್ದರೆ, ಅವನು ಮಂಡಲಿಗೆ ಅಂಥ ಸ್ವತ್ತು ಅಥವಾ ದಸ್ತಾವೇಜಿನ ಲೆಕ್ಕ ಕೊಡಲು ಹೊಣೆಯಾಗತಕ್ಕದ್ದು ಮತ್ತು ಅಧ್ಯಕ್ಷನಿಗೆ ಅಥವಾ ಅವನಿಂದ ಅಧಿಕೃತನಾದ ಇತರ ಯಾರೇ ವ್ಯಕ್ತಿಗೆ ಅದನ್ನು ಒಪ್ಪಿಸತಕ್ಕದ್ದು.

(5) ಮಂಡಲಿಯಲ್ಲಿ ನಿಹಿತವಾದ ಎಲ್ಲ ಸ್ವತ್ತುಗಳು ಮತ್ತು ಅದಕ್ಕೆ ಸಂಬಂಧಿಸಿದ ಎಲ್ಲ ದಸ್ತಾವೇಜುಗಳನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವ ಸಲುವಾಗಿ ಅಧ್ಯಕ್ಷನು ಅಥವಾ ಅಂಥ ವ್ಯಕ್ತಿಯು ಎಲ್ಲ ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು ಕಾನೂನು ಸಮ್ಮತವಾಗಿರತಕ್ಕದ್ದು.

9. **ಮಂಡಲಿ ನಿಧಿಯ ಸೃಜನೆ.–** ಮಂಡಲಿಯು, ಈ ಸಂಬಂಧವಾಗಿ ರಾಜ್ಯ ಸರ್ಕಾರವು ರಚಿಸಿದ ನಿಯಮಗಳ ಅನುಸಾರವಾಗಿ, ಮಿಥಿಕ್ ಸೊಸೈಟಿ ನಿಧಿ ಎಂದು ಕರೆಯಲಾಗುವ ಒಂದು ನಿಧಿಯನ್ನು ಸೃಜಿಸತಕ್ಕದ್ದು ಮತ್ತು ಅದನ್ನು ನಿರ್ವಹಿಸತಕ್ಕದ್ದು ಹಾಗೂ ಮಂಡಲಿಯ ಎಲ್ಲ ಸ್ವೀಕೃತಿಗಳನ್ನು ಮತ್ತು ಆದಾಯವನ್ನು ಅದಕ್ಕೆ ಸಂದಾಯ ಮಾಡತಕ್ಕದ್ದು ಮತ್ತು ಮಂಡಲಿಯ ಎಲ್ಲ ವೆಚ್ಚಗಳು ಮತ್ತು ಬಟವಾಡೆಗಳನ್ನು ಅದರಿಂದ ಭರಿಸತಕ್ಕದ್ದು. ಸದರಿ ನಿಧಿಯನ್ನು, ಅಧ್ಯಕ್ಷನು ಅಥವಾ ಅವನು ಅಧಿಕೃತಗೊಳಿಸಬಹುದಾದಂಥ ಇತರ ವ್ಯಕ್ತಿಯು ನಿರ್ವಹಿಸತಕ್ಕದ್ದು.

10. **ರಾಜ್ಯ ಸರ್ಕಾರದ ನಿರ್ದೇಶನಾಧಿಕಾರಗಳು.–** ರಾಜ್ಯ ಸರ್ಕಾರವು, ಮಂಡಲಿಗೆ, ತಾನು ಸೂಕ್ತವೆಂದು ಮತ್ತು ಅಗತ್ಯವೆಂದು ಪರಿಗಣಿಸಬಹುದಾದಂಥ ನಿರ್ದೇಶನವನ್ನು ನೀಡಬಹುದು ಮತ್ತು ಮಂಡಲಿಯು, ಆ ನಿರ್ದೇಶನಗಳನ್ನು ಕಾರ್ಯಗತಗೊಳಿಸತಕ್ಕದ್ದು.

11. **ಮಂಡಲಿಯ ಆಯವ್ಯಯ.–** (1) ಮಂಡಲಿಯು, ಪ್ರತಿ ಆರ್ಥಿಕ ವರ್ಷಕ್ಕೆ ಒಂದು ಆಯವ್ಯಯವನ್ನು ತಯಾರಿಸತಕ್ಕದ್ದು ಮತ್ತು ಅನುಮೋದನೆಗಾಗಿ ಅದನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(2) ರಾಜ್ಯ ಸರ್ಕಾರವು, ಅದರಲ್ಲಿ ಮಾರ್ಪಾಟುಗಳನ್ನು ಮಾಡಿ ಅಥವಾ ಮಾಡದೆಯೇ ಅದನ್ನು ಅನುಮೋದಿಸಬಹುದು.

12. **ಮಂಡಲಿಯನ್ನು ರದ್ದುಗೊಳಿಸುವ ಅಧಿಕಾರ.–** (1) ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಮಂಡಲಿಗೆ ವಿಧಿಸಿದ ಕರ್ತವ್ಯಗಳನ್ನು ನಿರ್ವಹಿಸಲು ಮಂಡಲಿಯು ಅಸಮರ್ಥವಾಗಿದೆಯೆಂದು ಅಥವಾ ನಿರಂತರವಾಗಿ ತಪ್ಪು ಮಾಡುತ್ತಿದೆಯೆಂದು ಅಥವಾ ತನ್ನ ಅಧಿಕಾರಗಳನ್ನು ಅತಿಕ್ರಮಿಸುತ್ತಿದೆಯೆಂದು ಅಥವಾ ದುರುಪಯೋಗ ಪಡಿಸಿಕೊಳ್ಳುತ್ತಿದೆ ಎಂದು ರಾಜ್ಯ ಸರ್ಕಾರವು ಅಭಿಪ್ರಾಯಪಟ್ಟಲ್ಲಿ, ರಾಜ್ಯ ಸರ್ಕಾರವು ರಾಜ್ಯಪತ್ರದಲ್ಲಿ ಅಧಿಸೂಚನೆ ಹೊರಡಿಸುವ ಮೂಲಕ ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅವಧಿಯವರೆಗೆ ಮಂಡಲಿಯನ್ನು ರದ್ದುಗೊಳಿಸಬಹುದು:

ಪರಂತು, ಈ ಉಪಪ್ರಕರಣದ ಅಡಿಯಲ್ಲಿ ಒಂದು ಅಧಿಸೂಚನೆಯನ್ನು ಹೊರಡಿಸುವುದಕ್ಕೆ ಮೊದಲು, ಅದನ್ನು ಏಕೆ ರದ್ದುಗೊಳಿಸಕೂಡದು ಎಂಬ ಬಗ್ಗೆ ನಿವೇದಿಸಿಕೊಳ್ಳಲು ಮಂಡಲಿಗೆ ಒಂದು ಯುಕ್ತ ಅವಕಾಶವನ್ನು ನೀಡತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಮಂಡಲಿಯನ್ನು ರದ್ದುಗೊಳಿಸುವ ಅಧಿಸೂಚನೆಯನ್ನು ಪ್ರಕಟಿಸಿದ ಮೇಲೆ,–

(ಎ) ಮಂಡಲಿಯ ಎಲ್ಲ ಸದಸ್ಯರು ರದ್ದಿಯಾತಿಯ ದಿನಾಂಕದಿಂದ ಅಂಥ ಸದಸ್ಯರಾಗಿ ತಮ್ಮ ಪದಗಳನ್ನು ತೆರವುಗೊಳಿಸತಕ್ಕದ್ದು;

(ಬಿ) ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅಡಿಯಲ್ಲಿ ಮಂಡಲಿಯು ಚಲಾಯಿಸಬಹುದಾಗಿದ್ದ ಮತ್ತು ನೆರವೇರಿಸಬಹುದಾಗಿದ್ದ ಎಲ್ಲ ಅಧಿಕಾರಗಳು ಮತ್ತು ಕರ್ತವ್ಯಗಳನ್ನು ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ವ್ಯಕ್ತಿ ಅಥವಾ ವ್ಯಕ್ತಿಗಳು ಚಲಾಯಿಸಬಹುದು ಮತ್ತು ನೆರವೇರಿಸಬಹುದು; ಮತ್ತು

(ಸಿ) ಮಂಡಲಿಯಲ್ಲಿ ನಿಹಿತವಾಗಿದ್ದ ಎಲ್ಲ ಸ್ವತ್ತುಗಳು ರದ್ದಿಯಾತಿಯ ಅವಧಿಯಲ್ಲಿ ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು.

(3) (1)ನೇ ಉಪ ಪ್ರಕರಣದ ಅಡಿಯಲ್ಲಿ ಹೊರಡಿಸಿದ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ರದ್ದಿಯಾತಿ ಅವಧಿಯು ಮುಕ್ತಾಯವಾದ ನಂತರ, ರಾಜ್ಯ ಸರ್ಕಾರವು,–

(ಎ) ರದ್ದಿಯಾತಿಯ ಅವಧಿಯನ್ನು ತಾನು ಅಗತ್ಯವೆಂದು ಪರಿಗಣಿಸಬಹುದಾದಂಥ ಹೆಚ್ಚಿನ ಅವಧಿಗೆ ವಿಸ್ತರಿಸಬಹುದು ; ಅಥವಾ

(ಬಿ) 4ನೇ ಪ್ರಕರಣದಲ್ಲಿ ಉಪಬಂಧಿಸಲಾದ ರೀತಿಯಲ್ಲಿ ಮಂಡಲಿಯನ್ನು ಪುನಾರಚಿಸಬಹುದು.

**13. ನಿಯಮ ರಚನಾಧಿಕಾರ.–** ರಾಜ್ಯ ಸರ್ಕಾರವು, ರಾಜ್ಯ ಪತ್ರದಲ್ಲಿ ಅಧಿಸೂಚನೆ ಹೊರಡಿಸುವ ಮೂಲಕ ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ನಿಯಮಗಳನ್ನು ರಚಿಸಬಹುದು.

**14. ಮಂಡಲಿಯ ವಿನಿಯಮ ರಚನಾಧಿಕಾರ.–** ಮಂಡಲಿಯು, ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು, ಈ ಮುಂದಿನ ಎಲ್ಲ ಉದ್ದೇಶಗಳಿಗಾಗಿ ಅಥವಾ ಯಾವುದೇ ಉದ್ದೇಶಕ್ಕಾಗಿ ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಲ್ಲದ ವಿನಿಯಮಗಳನ್ನು ರಚಿಸಬಹುದು, ಎಂದರೆ: –

(ಎ) ಮಂಡಲಿಯ ಸಭೆಗಳನ್ನು ಕರೆಯತಕ್ಕ ರೀತಿ, ಅದರಲ್ಲಿ ಯಾವುದೇ ಕಾರ್ಯ ಕಲಾಪಗಳನ್ನು ನಡೆಸಲು ಇರಬೇಕಾದ ಕೋರಂ ಹಾಗೂ ಅಂಥ ಸಭೆಗಳಲ್ಲಿನ ಕಾರ್ಯ ವಿಧಾನ ;

(ಬಿ) ನಿರ್ಣಯ ತೆಗೆದುಕೊಳ್ಳುವುದು ಅಗತ್ಯವಾಗಿರುವ ವಿಷಯಗಳ ಸಂಬಂಧದಲ್ಲಿ, ಸದಸ್ಯರಿಗೆ ಸುತ್ತೋಲೆ ಕಳುಹಿಸುವ ಮೂಲಕ ಮಂಡಲಿಯ ಬಹುಮತದ ನಿರ್ಣಯವನ್ನು ಪಡೆದುಕೊಳ್ಳತಕ್ಕ ವಿಧಾನ;

(ಸಿ) 7ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ ಅವಶ್ಯವಾಗಬಹುದಾದಂಥ ಅಧಿಕಾರಿಗಳು ಮತ್ತು ನೌಕರರ ನೇಮಕಾತಿ ಮತ್ತು ಅವರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು.

**15. 1975ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 18ರ ನಿರಸನ.–** (1) ಮಿಥಿಕ್ ಸೊಸೈಟಿ (ವಿಸರ್ಜನೆ ಮತ್ತು ವ್ಯವಸ್ಥಾಪನೆ) ಅಧ್ಯಾದೇಶ, 1975ನ್ನು (1975ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 18) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸಿತವಾಗಿದ್ದರೂ, ಸದರಿ ಅಧ್ಯಾದೇಶದ ಅಡಿಯಲ್ಲಿ ಮಾಡಿದ ಯಾವುದೇ ಕೃತ್ಯವನ್ನು ಅಥವಾ ಕೈಗೊಂಡ ಯಾವುದೇ ಕ್ರಮವನ್ನು, ಈ ಅಧಿನಿಯಮದ ಸಂವಾದಿ ಉಪಬಂಧಗಳ ಅಡಿಯಲ್ಲಿ ಮಾಡಲಾಗಿದೆಯೆಂದು ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

The above translation of the Mythic Society (Dissolution and Management) Act, 1976 (Karnataka Act 20 of 1976) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA
ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್. 822

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 17 ರಾಶಾಪ್ರ 2006, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2006**

ಕರ್ನಾಟಕ ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957ರ (1957ರ 28) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

**ಕರ್ನಾಟಕ ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957**

**ಪ್ರಕರಣಗಳ ಅನುಕ್ರಮಣಿಕೆ**

**ಪ್ರಕರಣಗಳು:**

6. ವಂತಿಗೆ ಸಂದಾಯದ ವಿಧಾನ
7. ವಂತಿಗೆಯನ್ನು ಭೂಕಂದಾಯದ ಬಾಕಿಯಂತೆ ವಸೂಲು ಮಾಡುವುದು
8. ಜಮೀನಿನಲ್ಲಿ ಹಿತಾಸಕ್ತಿ ಹೊಂದಿದ ವ್ಯಕ್ತಿಯಿಂದ ವಂತಿಗೆಯ ಸಂದಾಯ
9. ವಂತಿಗೆಗೆ ಸಂಬಂಧಿಸಿದ ಹಣ ತುಂಬಿಕೊಡುವ ಹಕ್ಕು
10. ನೀರು ದರ ವಿಧಿಸುವಿಕೆ
10ಎ. ಈ ಅಧಿನಿಯಮವನ್ನು ತುಂಗಭದ್ರಾ ಯೋಜನೆಗೆ ಅನ್ವಯಿಸುವುದು
11. ನಿಯಮ ರಚನಾಧಿಕಾರ
12. ನಿರಸನ ಮತ್ತು ಉಳಿಸುವಿಕೆಗಳು
ಅಧಿಸೂಚನೆ

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**I**

**1957ರ ಅಧಿನಿಯಮ 28:–** ನೀರಾವರಿ ಕಾಮಗಾರಿಯ ಪ್ರಯೋಜನ ಪಡೆದ ಜಮೀನುಗಳಿಗೆ ಸಂಬಂಧಿಸಿದಂತೆ, ಅಭಿವೃದ್ಧಿ ತೆರಿಗೆ ಮತ್ತು ನೀರಿನ ದರ ವಿಧಿಸುವ ಕ್ರಮವನ್ನು ಈಗ ಸಾರ್ವತ್ರಿಕವಾಗಿ ಅಂಗೀಕರಿಸಲಾಗಿದೆ. ಹೊಸ ಮೈಸೂರು ರಾಜ್ಯದೊಂದಿಗೆ ಏಕೀಕರಣಗೊಂಡ ಪ್ರದೇಶಗಳಲ್ಲಿ ಜಾರಿಯಲ್ಲಿದ್ದ ನೀರಾವರಿ ಕಾನೂನುಗಳಲ್ಲಿ, ಈ ಸಂಬಂಧದಲ್ಲಿ ರಚಿಸಲಾದ ಉಪಬಂಧಗಳಲ್ಲಿ ಏಕರೂಪತೆ ಇಲ್ಲ. ಇಡೀ ರಾಜ್ಯಕ್ಕೆ ಸಾಧ್ಯವಾದಮಟ್ಟಿಗೆ ಒಂದೇ ರೀತಿಯ ನೀರಾವರಿ ಕಾನೂನನ್ನು ಅನ್ವಯಿಸುವ ಪ್ರಶ್ನೆಯು ಪರಿಶೀಲನೆಯಲ್ಲಿದೆ. ಈ ಮಧ್ಯೆ, ಅಭಿವೃದ್ಧಿ ತೆರಿಗೆ ಮತ್ತು ನೀರಿನ ದರ ವಿಧಿಸುವುದಕ್ಕೆ ಸಂಬಂಧಿಸಿದ ಕಾನೂನುಗಳನ್ನು ಕ್ರೋಡೀಕರಿಸುವುದು ಮತ್ತು ಅವುಗಳನ್ನು ಹೊಸ ಮೈಸೂರು ರಾಜ್ಯದಾದ್ಯಂತ ಇರುವ ಪರಿಸ್ಥಿತಿಗಳಿಗೆ ಹೊಂದಿಕೆಯಾಗುವ ಹಾಗೆ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ದಿನಾಂಕ 20.6.1957ರ ವಿಧಾನ ಸಭಾ ಅಧಿಸೂಚನೆ ಸಂಖ್ಯೆ 5847 ರಿಂದ ಪಡೆಯಲಾಗಿದೆ)

**II**

**1961ರ ತಿದ್ದುಪಡಿ ಮಾಡುವ ಅಧಿನಿಯಮ 23.–** ರಾಜ್ಯದಲ್ಲಿ ನೀರಾವರಿ ಕಾಮಗಾರಿಗಳ ಅಡಿಯಲ್ಲಿ ಬರುವ ಜಮೀನುಗಳಿಗೆ ಸಂಬಂಧಿಸಿದಂತೆ, ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರವನ್ನು 1957ರ ಅಕ್ಟೋಬರ್ ನಲ್ಲಿ ಕಾನೂನಾಗಿ ಹೊರಡಿಸಲಾದ ಮೈಸೂರು ನೀರಾವರಿ (ಪುರೋಭಿವೃದ್ಧಿ ತೆರಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957ರ ಉಪಬಂಧಗಳ ಅಡಿಯಲ್ಲಿ ವಿಧಿಸಬೇಕಾಗುತ್ತದೆ. ಅಧಿನಿಯಮದ 4ನೇ ಪ್ರಕರಣವು, ಪುರೋಭಿವೃದ್ಧಿ ವಂತಿಗೆಯನ್ನು ವಿಧಿಸುವ ಬಗ್ಗೆ ಉಪಬಂಧಿಸುತ್ತದೆ ಮತ್ತು ವಂತಿಗೆಯು ಎಕರೆಗೆ ಯಾವ ಸಂದರ್ಭದಲ್ಲಿಯೂ ಐದುನೂರು ರೂಪಾಯಿಗಳಿಗಿಂತ ಹೆಚ್ಚಾಗಿರತಕ್ಕದ್ದಲ್ಲವೆಂಬ ಬಗ್ಗೆ ಉಪಬಂಧಿಸುತ್ತದೆ. ಅನೇಕ ಸಂದರ್ಭಗಳಲ್ಲಿ ಫಲಾನುಭವಿಗಳು ನೀರಾವರಿ ಕಾಮಗಾರಿಯ ಸೌಲಭ್ಯಗಳನ್ನು ಪಡೆಯುವ ಸಲುವಾಗಿ ಇನ್ನೂ ಹೆಚ್ಚಿನ ವಂತಿಗೆಯನ್ನು ಸಂದಾಯ ಮಾಡಲು ಸಿದ್ಧರಿರುತ್ತಾರೆಂದು ಕಂಡುಬಂದಿದೆ. ಜಮೀನಿನ ಮೌಲ್ಯದ ಹೆಚ್ಚಳವು ಎಕರೆಗೆ 1000 ರೂ.ಗಳಿಗಿಂತ ಹೆಚ್ಚಾಗಿರುವ ಸಂದರ್ಭಗಳಿದ್ದು ಅಂಥ ಸಂದರ್ಭಗಳಲ್ಲಿ, ವಂತಿಗೆ ಮೊತ್ತದ ಮೇಲೆ ಈಗ ನಿಗದಿಪಡಿಸಿರುವ ಗರಿಷ್ಠ ಮಿತಿಯಿಂದ ಅರ್ಧದಷ್ಟು ಪುರೋಭಿವೃದ್ಧಿ ಮೌಲ್ಯವನ್ನು ವಸೂಲಿ ಮಾಡಲು ಕೂಡ ಸರ್ಕಾರಕ್ಕೆ ಅಡ್ಡಿಯಾಗುವ ನಿದರ್ಶನಗಳೂ ಇವೆ. ಅಲ್ಲದೆ, ಹೆಚ್ಚಿನ ಪ್ರಕರಣಗಳಲ್ಲಿ ನೀರಾವರಿ ಕಾಮಗಾರಿಗಳಿಗೆ ಅಂದಾಜುಗಳನ್ನು ನಿರೀಕ್ಷಿತ ಹಣಕಾಸು ವಸೂಲಿಗಳಿಗೆ ಸಂಬಂಧಪಟ್ಟಂತೆ ಮಂಜೂರು ಮಾಡಲಾಗುತ್ತದೆ. ಆದ್ದರಿಂದ ಅನೇಕ ಪ್ರಕರಣಗಳಲ್ಲಿ ವಂತಿಗೆ ಮೊತ್ತವನ್ನು ಎಕರೆ ಒಂದಕ್ಕೆ 500 ರೂ.ಗಳಿಗೆ ನಿರ್ಬಂಧಿಸದೆ 4ನೇ ಪ್ರಕರಣದ ಪರಂತುಕವನ್ನು ತಿದ್ದುಪಡಿ ಮಾಡಿದರೆ, ಕನಿಷ್ಠ ಲಾಭವನ್ನು ಪಡೆಯಬಹುದು.

ಅಧಿನಿಯಮದ 10ನೇ ಪ್ರಕರಣವು ನೀರಿನ ದರ ವಿಧಿಸುವುದಕ್ಕೆ ಸಂಬಂಧಿಸಿದುದಾಗಿದೆ. ಸದರಿ ಪ್ರಕರಣದ ಪರಂತುಕದ ಅನುಸಾರ, ಕೆಲವು ವರ್ಗದ ಪ್ರಕರಣಗಳಲ್ಲಿ ಯಾವುದೇ ನೀರಿನ ದರವನ್ನು ವಿಧಿಸಲಾಗುವುದಿಲ್ಲ. ನೀರಿನ ಸರಬರಾಜಿನ ಭರವಸೆಯ ಸ್ವರೂಪದ ಮತ್ತು ನೀರಾವರಿ ಕಾಮಗಾರಿಗಳ ನಿರ್ವಹಣೆಯ ವೆಚ್ಚದಲ್ಲಿ ಉಂಟಾದ ಹೆಚ್ಚಳದ ದೃಷ್ಟಿಯಿಂದ ಹಾಗೆ ವಿಧಿಸುವುದು ನ್ಯಾಯಯುತವೆನ್ನುವ ಸಂದರ್ಭಗಳಲ್ಲಿ ಈಗ ತರಿಭೂಮಿ ಎಂಬುದಾಗಿ ನಿರ್ಧರಣೆ ಮಾಡಿದ ಜಮೀನುಗಳ ಮೇಲೆ ನೀರಿನ ದರವನ್ನು ವಿಧಿಸಬಹುದಾದ್ದರಿಂದ ಪರಂತುಕವನ್ನು ಬಿಟ್ಟುಬಿಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಅಂತರರಾಜ್ಯ ಸ್ವರೂಪದ ಕಾಮಗಾರಿಗಳಿಗೆ ಸಂಬಂಧಿಸಿದ ಸಂದರ್ಭಗಳಲ್ಲಿ ನಿಯಮಗಳನ್ನು ರಚಿಸಲು ರಾಷ್ಟ್ರಪತಿಯ ಅನುಮೋದನೆ ಪಡೆಯಬೇಕೆಂಬ ಬಗ್ಗೆ ಉಪಬಂಧ ಕಲ್ಪಿಸುವ ಸಲುವಾಗಿ ಒಂದು ಹೊಸ ಪ್ರಕರಣವನ್ನು ಸೇರಿಸಲು ಪ್ರಸ್ತಾವಿಸಲಾಗಿದೆ.

ಪ್ರಸ್ತಾವಿಸಲಾದ ಇತರ ತಿದ್ದುಪಡಿಗಳು ಮೌಖಿಕ ಸ್ವರೂಪದ್ದಾಗಿವೆ.

(ಕರ್ನಾಟಕ ರಾಜ್ಯಪತ್ರ, ಭಾಗ IV–2ಎ, ದಿನಾಂಕ 9ನೇ ಏಪ್ರಿಲ್ 1959, ಪುಟ 147ರಲ್ಲಿ ಪ್ರಕಟಿಸಲಾಗಿದೆ)

## III

**1964ರ ತಿದ್ದುಪಡಿ ಮಾಡುವ ಅಧಿನಿಯಮ 8.–** ಮೈಸೂರು ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ 1957, ಇದು ಸರ್ಕಾರದಿಂದ ಆದ ಯಾವುದೇ ನೀರಾವರಿ ಕಾಮಗಾರಿಯ ನಿರ್ಮಾಣ, ಜೀರ್ಣೋದ್ಧಾರ, ವಿಸ್ತರಣೆ ಅಥವಾ ಬದಲಾವಣೆ ಮೂಲಕ ಪ್ರಯೋಜನ ಪಡೆದ ಜಮೀನುಗಳಿಗೆ ಪುರೋಭಿವೃದ್ಧಿ ವಂತಿಗೆಯನ್ನು ವಿಧಿಸಲು ಮತ್ತು ವಸೂಲಿ ಮಾಡಲು ಹಾಗೂ ನೀರಿನ ದರವನ್ನು ವಿಧಿಸಲು ಉಪಬಂಧ ಕಲ್ಪಿಸುತ್ತದೆ. ಈ ಅಧಿನಿಯಮದ ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ವಿಧಿಸಲಾದ ಕಾರ್ಯವಿಧಾನದ ಅನುಸಾರ ವಂತಿಗೆಯನ್ನು ನಿರ್ಧರಿಸುವ ಕೆಲಸವು ಗಣನೀಯವಾದುದು ಹಾಗೂ ಜಟಿಲವಾದುದು ಎಂದು ಕಂಡುಬಂದಿದೆ ಹಾಗೂ ಪುರೋಭಿವೃದ್ಧಿ ವಂತಿಗೆ ವಿಧಿಸುವ ಕಾರ್ಯದ ನಿಧಾನಗತಿಗೆ ಇದು ಕಾರಣವಾಗಿದೆ. ಪುರೋಭಿವೃದ್ಧಿ ವಂತಿಗೆಯ ದರಗಳನ್ನು ಅಧಿನಿಯಮದಲ್ಲಿಯೇ ನಿರ್ದಿಷ್ಟಪಡಿಸುವ ಮೂಲಕ ಮತ್ತು ಅಧಿನಿಯಮವನ್ನು ಸೂಕ್ತವಾಗಿ ತಿದ್ದುಪಡಿ ಮಾಡುವ ಮೂಲಕ ಈ ಅಧಿನಿಯಮದಲ್ಲಿ ವಿಧಿಸಿದ ಕಾರ್ಯವಿಧಾನವನ್ನು ಸರಳೀಕರಿಸಬಹುದೆಂದು ಪರಿಗಣಿಸಲಾಗಿದೆ. ನೀರಾವರಿ ಕಾಮಗಾರಿಗಳನ್ನು ಭಾರೀ ನೀರಾವರಿ ಕಾಮಗಾರಿ, ಮಧ್ಯಮ ನೀರಾವರಿ ಕಾಮಗಾರಿ ಮತ್ತು ಸಣ್ಣ ನೀರಾವರಿ ಕಾಮಗಾರಿ ಎಂಬುದಾಗಿಯೂ ಮತ್ತು ಪುರೋಭಿವೃದ್ಧಿ ವಂತಿಗೆಯನ್ನು ಮೂಲ ವಂತಿಗೆ ಹಾಗೂ ವಿಶೇಷ ಸೌಲಭ್ಯ ವಂತಿಗೆ ಎಂಬುದಾಗಿ ವರ್ಗೀಕರಿಸಲು ಪ್ರಸ್ತಾವಿಸಲಾಗಿದೆ. ಅಂಥ ಪುರೋಭಿವೃದ್ಧಿ ತೆರಿಗೆಯ ದರಗಳನ್ನು ಸಹ ನಿರ್ದಿಷ್ಟಪಡಿಸಿದೆ.

ಮದ್ರಾಸು ನೀರಾವರಿ ಉಪಕರ ಅಧಿನಿಯಮ, 1865ರ ಅಡಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಮಾಡಲಾದ ನೀರಾವರಿ ಉಪಕರದ ಕೆಲವು ಸಂಗ್ರಹಣೆಗಳನ್ನು ಕ್ರಮಬದ್ಧಗೊಳಿಸುವುದೂ ಸಹ ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## IV

**1965ರ ತಿದ್ದುಪಡಿ ಮಾಡುವ ಅಧಿನಿಯಮ 18.–** ಬೆಳೆದ ಅಥವಾ ಬೆಳೆಯಬಹುದಾದ ವಿವಿಧ ಬೆಳೆಗಳಿಗೆ ಸಂಬಂಧಪಟ್ಟಂತೆ ಪೂರೈಸಲಾದ, ಲಭ್ಯವಾಗುವಂತೆ ಮಾಡಲಾದ ಅಥವಾ ಬಳಸಲಾದ ನೀರಿಗೆ ಸಂಬಂಧಪಟ್ಟ ಹಾಗೆ ಪ್ರಸಕ್ತ ನೀರಿನ ದರವನ್ನು ಮೈಸೂರು ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957ರ ಅಡಿಯಲ್ಲಿ ವಿಧಿಸಬಹುದಾಗಿದೆ.

ಜಮೀನಿನಲ್ಲಿ ಬೆಳೆದ ಅಥವಾ ಬೆಳೆಯಬಹುದಾದ ಬೆಳೆ ಅಥವಾ ಬೆಳೆಗಳಿಗೆ ಸಂಬಂಧಪಟ್ಟಂತೆ ಅಥವಾ ಸಂಬಂಧಪಟ್ಟಿಲ್ಲದಂತೆ, ವಿವಿಧ ನೀರಾವರಿ ಕಾಮಗಾರಿಗಳಿಂದ ಸರಬರಾಜು ಮಾಡಿದ, ಲಭ್ಯವಾಗುವಂತೆ ಮಾಡಿದ ಅಥವಾ ಬಳಸಿದ ನೀರಿನ ಸಂಬಂಧದಲ್ಲಿ ವ್ಯತ್ಯಾಸವಾಗಬಹುದಾದ ನೀರಿನ ದರವನ್ನು ವಿಧಿಸುವುದಕ್ಕೆ ಉಪಬಂಧ ಕಲ್ಪಿಸುವ 10 (1)ನೇ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ದಿನಾಂಕ 16ನೇ ಅಕ್ಟೋಬರ್ 1965ರ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ–IV–2ಎ, ಸಂ 202 ಪುಟ 3ರಲ್ಲಿ ಪ್ರಕಟಿಸಲಾಗಿದೆ.)

## V

**1966ರ ತಿದ್ದುಪಡಿ ಮಾಡುವ ಅಧಿನಿಯಮ 13.–** ಮೈಸೂರು ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957 ಕ್ಕೆ 1964ರ ಅಧಿನಿಯಮ ಸಂಖ್ಯೆ 8ರ ಮೂಲಕ ಮಾಡಲಾದ ತಿದ್ದುಪಡಿಯಲ್ಲಿ ವಿವಿಧ ನೀರಾವರಿ ಕಾಮಗಾರಿಗಳಿಂದ ಪ್ರಯೋಜನ ಪಡೆದ ಜಮೀನುಗಳ ಸಂಬಂಧದಲ್ಲಿ ಕೆಲವು ನಿರ್ದಿಷ್ಟಪಡಿಸಿದ ದರಗಳಲ್ಲಿ ಪುರೋಭಿವೃದ್ಧಿ ವಂತಿಗೆಯನ್ನು ವಿಧಿಸಲು ಮತ್ತು ವಸೂಲಿ ಮಾಡಲು ಉಪಬಂಧ ಕಲ್ಪಿಸಲಾಗಿದೆ. ದರ ವಿಧಿಸುವಿಕೆಯು, ನೀರಾವರಿಯ ಪ್ರಯೋಜನ ಪಡೆದ ಜಮೀನುಗಳ ಮೌಲ್ಯದಲ್ಲಿ ಉಂಟಾಗುವ ಹೆಚ್ಚಳಕ್ಕೆ ಸಂಬಂಧಪಟ್ಟಿರಬೇಕೆಂದು ಪರಿಗಣಿಸಲಾಗಿದೆ. ಆದ್ದರಿಂದ, 3 ಮತ್ತು 4ನೇ ಪ್ರಕರಣಗಳನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

(ದಿನಾಂಕ 24ನೇ ಫೆಬ್ರವರಿ 1966ರ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಭಾಗ IV–2ಎ ಸಂ.31 ಪುಟ 6ರಲ್ಲಿ ಪ್ರಕಟಿಸಲಾಗಿದೆ.)

## VI

**1968ರ ತಿದ್ದುಪಡಿ ಮಾಡುವ ಅಧಿನಿಯಮ 16.–** ಮೈಸೂರು ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957ರ ಅಡಿಯಲ್ಲಿ ಯಾವುದೇ ಜಮೀನಿನ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಪುರೋಭಿವೃದ್ಧಿ ವಂತಿಗೆಯ ಗರಿಷ್ಠ ಮೊತ್ತವನ್ನು ಎಕರೆಗೆ ಮುನ್ನೂರು ರೂಪಾಯಿಗಳಂತೆ ನಿಗದಿಪಡಿಸಲಾಗಿದೆ. ಗರಿಷ್ಠಮಿತಿಯನ್ನು ಐದು ನೂರು ರೂಪಾಯಿಗಳಿಗೆ ಹೆಚ್ಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ದಿನಾಂಕ 22ನೇ ಆಗಸ್ಟ್ 1968ರ ಕರ್ನಾಟಕ ರಾಜ್ಯಪತ್ರ ಭಾಗ IV–2ಎ, ಪುಟ 37 ಇದರಲ್ಲಿ ಪ್ರಕಟಿಸಲಾಗಿದೆ.)

## VII

**1974ರ ತಿದ್ದುಪಡಿ ಮಾಡುವ ಅಧಿನಿಯಮ 29.–** ಕರ್ನಾಟಕ ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957ರ ಅನುಸಾರ, ಪುರೋಭಿವೃದ್ಧಿ ವಂತಿಗೆಯ ದರವು, ಎಕರೆಗೆ ಕನಿಷ್ಠ 500 ರೂ.ಗಳಿಗೊಳಪಟ್ಟು ಹೆಚ್ಚಾದ ಮೌಲ್ಯದ ಅರ್ಧದಷ್ಟಿತ್ತು. ನೀರಾವರಿ ಜಮೀನುಗಳ ಮೌಲ್ಯದಲ್ಲಿ ಉಂಟಾಗಿರುವ ವಾಸ್ತವ

ಹೆಚ್ಚಳವನ್ನು ಪರಿಗಣಿಸಿ, ಸದರಿ ಗರಿಷ್ಠ ದರವನ್ನು ಎಕರೆಗೆ 500 ರೂ.ಗಳಿಂದ 1,500 ರೂ.ಗಳವರೆಗೆ ಹೆಚ್ಚಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ವಿಧಾನಸಭೆಯು ಅಧಿವೇಶನದಲ್ಲಿಲ್ಲದಿರುವುದರಿಂದ, ಸದರಿ ಉದ್ದೇಶಕ್ಕಾಗಿ ಅಧಿನಿಯಮವನ್ನು ತಿದ್ದುಪಡಿ ಮಾಡುವ ಅಧ್ಯಾದೇಶವನ್ನು 22ನೇ ಜೂನ್ 1974 ರಂದು ಪ್ರಖ್ಯಾಪಿಸಲಾಯಿತು. ನೋಟೀಸುಗಳ ಜಾರಿ ಕುರಿತಂತೆ ಆನುಷಂಗಿಕ ಉಪಬಂಧಗಳನ್ನೂ ಸಹ ಮಾಡಲಾಯಿತು.

ಸದರಿ ಅಧ್ಯಾದೇಶದ ಬದಲಿಗೆ ಈ ವಿಧೇಯಕವನ್ನು ಮಂಡಿಸಬೇಕಾಗಿದೆ.

(ದಿನಾಂಕ 14ನೇ ಆಗಸ್ಟ್ 1974ರ ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯ ಭಾಗ IV– 2ಎ ಸಂ 2591, ಪುಟ 4ರಲ್ಲಿ ಪ್ರಕಟಿಸಲಾಗಿದೆ.)

## VIII

**1995ರ ತಿದ್ದುಪಡಿ ಮಾಡುವ ಅಧಿನಿಯಮ 16.–** ನೀರು ನಿರ್ವಹಣೆಯಲ್ಲಿ ಉತ್ತಮ ಫಲಿತಾಂಶಗಳನ್ನು ಸಾಧಿಸುವ ಉದ್ದೇಶದಿಂದ, ಕರ್ನಾಟಕ ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957ರ 10ನೇ ಪ್ರಕರಣವನ್ನು ತಿದ್ದುಪಡಿ ಮಾಡುವ ಮೂಲಕ ನಿರ್ವಹಣೆ ಮತ್ತು ನೀರಿನ ದರಗಳ ವಸೂಲಿಯ ಹೊಣೆಗಾರಿಕೆಯನ್ನು ಬಳಕೆದಾರರ ಸಹಕಾರ ಸಂಘಗಳಿಗೆ ವಹಿಸಿಕೊಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ದಿನಾಂಕ 19ನೇ ಏಪ್ರಿಲ್ 1995ರ ಕರ್ನಾಟಕ ರಾಜ್ಯಪತ್ರ ವಿಶೇಷ ಸಂಚಿಕೆಯ ಭಾಗ IV– 2ಎ, ಸಂ 470, ಪುಟ 4ರಲ್ಲಿ ಪ್ರಕಟಿಸಲಾಗಿದೆ.)

## IX

**1995ರ ತಿದ್ದುಪಡಿ ಮಾಡುವ ಅಧಿನಿಯಮ 21.–** ಯಾವುದೇ ನೀರಾವರಿ ಕಾಮಗಾರಿಗಳಿಗೆ ನೀರು ಸರಬರಾಜು ಮಾಡುವ ಕಾಮಗಾರಿಯನ್ನು ಕೃಷ್ಣ ಭಾಗ್ಯ ಜಲ ನಿಗಮಕ್ಕೆ ವಹಿಸಿಕೊಡಲು ಮತ್ತು ನೀರು ದರಗಳನ್ನು ನಿಗದಿಪಡಿಸುವ ಮತ್ತು ವಸೂಲಿ ಮಾಡುವ ಜವಾಬ್ದಾರಿಯನ್ನು ನೀಡಿ ಸದರಿ ನಿಗಮವನ್ನು ಶಕ್ತಗೊಳಿಸಲು ಕರ್ನಾಟಕ ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957 ಇದನ್ನು ಸೂಕ್ತವಾಗಿ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಸಂಬಂಧಪಟ್ಟ ವಿಧೇಯಕದಿಂದ, ಎಂದರೆ ವಿ.ಸ ವಿಧೇಯಕ ಸಂಖ್ಯೆ 1995ರ 17 ರಿಂದ ಪಡೆಯಲಾಗಿದೆ.)

## X

**2000ದ ತಿದ್ದುಪಡಿ ಮಾಡುವ ಅಧಿನಿಯಮ 24.–** ನೀರಿನ ನಿರ್ವಹಣೆಯಲ್ಲಿ ಉತ್ತಮ ಫಲಿತಾಂಶಗಳನ್ನು ಸಾಧಿಸಲು ನೀರಾವರಿಯ ನೀರು ನಿರ್ವಹಣಾ ವ್ಯವಸ್ಥೆಯಲ್ಲಿ ನೀರು ಬಳಕೆದಾರರ ಸಹಕಾರ ಸಂಘಗಳು ಮತ್ತು ಅವುಗಳ ಮಹಾಮಂಡಲಗಳ ಮೂಲಕ ರೈತರನ್ನು ತೊಡಗಿಸಿಕೊಳ್ಳುವುದು ಮತ್ತು ಅವರಿಗೆ ಅಧಿಕಾರ ನೀಡುವುದು ಅವಶ್ಯವೆಂದು ಪರಿಗಣಿಸಲಾಗಿದೆ. ತದನುಸಾರವಾಗಿ, ಕರ್ನಾಟಕ ನೀರಾವರಿ ಅಧಿನಿಯಮ, 1965ನ್ನು ಈ ಮುಂದಿನಂತೆ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ, ಎಂದರೆ,–

(i) ನೀರಾವರಿ ಕಾಮಗಾರಿಗಳ ನಿಯಂತ್ರಣ, ನಿರ್ವಹಣೆ ಮತ್ತು ಮೇಲ್ವಿಚಾರಣೆಯನ್ನು ನೀರು ಬಳಕೆದಾರರ ಸಂಘಗಳಿಗೆ ವಹಿಸಿಕೊಡಲು ಉಪಬಂಧಿಸುವುದು;

(ii) ಕಾಲುವೆಗಳನ್ನು ದಾಟಲು ಮಾರ್ಗಗಳನ್ನು ಒದಗಿಸಲು ಮತ್ತು ಒಳಚರಂಡಿಗಳಿಗೆ ಉಂಟಾಗುವ ಅಡಚಣೆಗಳನ್ನು ನಿವಾರಿಸಲು ಅಡಿಗಾಲುವೆ ಇತ್ಯಾದಿಗಳನ್ನು ನಿರ್ಮಾಣ ಮಾಡಲು ನೀರು ಬಳಕೆದಾರ ಸಂಘಗಳನ್ನು ಸಮರ್ಥಗೊಳಿಸುವುದು;

(iii) ಅವಶ್ಯವಿರುವೆಡೆಯಲ್ಲೆಲ್ಲ, ಒಳಚರಂಡಿಯನ್ನು ನಿರ್ಮಿಸಲು ನೀರು ಬಳಕೆದಾರರ ಸಂಘಕ್ಕೆ ಅಧಿಕಾರ ನೀಡುವುದು;

(iv) ಬಳಕೆದಾರರು ಹೊಲಕಾಲುವೆಯನ್ನು ದುರಸ್ತಿ ಮಾಡಲು ತಪ್ಪಿದ ಸಂದರ್ಭದಲ್ಲಿ ನೀರು ಬಳಕೆದಾರರ ಸಂಘವು ಹೊಲಕಾಲುವೆಯನ್ನು ದುರಸ್ತಿಗೊಳಿಸಲು ಮತ್ತು ಅದರ ವೆಚ್ಚಗಳನ್ನು ಬಳಕೆದಾರನಿಂದ ವಸೂಲು ಮಾಡಲು ಅಧಿಕಾರ ನೀಡುವುದು;

(v) ನೀರಾವರಿ ಕಾಮಗಾರಿಯಿಂದ ನೀರು ಸರಬರಾಜನ್ನು ನಿಯಂತ್ರಿಸಲು ನೀರು ಬಳಕೆದಾರರ ಯೋಜನಾ ಮಟ್ಟದ ಮಹಾಮಂಡಲದೊಂದಿಗೆ ಸಮಾಲೋಚಿಸಲು ಉಪಬಂಧ ಕಲ್ಪಿಸುವುದು;

(vi) ನೀರನ್ನು ತಾತ್ಕಾಲಿಕವಾಗಿ ದೊರಕುವಂತೆ ಮಾಡಿದಾಗ ಹಾಗೂ ನೀರನ್ನು ಅನಧಿಕೃತವಾಗಿ ಬಳಸಿದಾಗ ಅದಕ್ಕೆ ನೀರಿನ ದರವನ್ನು ವಿಧಿಸಲು ನೀರು ಬಳಕೆದಾರರ ಸಂಘಕ್ಕೆ ಅಧಿಕಾರ ನೀಡುವುದು;

(vii) ಬೆಳೆಯುವ ಮಾದರಿಯನ್ನು ಉಲ್ಲಂಘಿಸಿದ ಮತ್ತು ನೀರು ದರಗಳನ್ನು ಸಂದಾಯ ಮಾಡದಿದ್ದ ಸಂದರ್ಭದಲ್ಲಿ ನೀರು ಸರಬರಾಜು ಮಾಡುವುದನ್ನು ನಿಲ್ಲಿಸಲು ಮತ್ತು ಬೆಳೆಯ ಉಲ್ಲಂಘನೆಯ ಸಂದರ್ಭಗಳಲ್ಲಿ ದಂಡ ರೂಪದ ನೀರಿನ ದರವನ್ನು ವಿಧಿಸಲು ನೀರು ಬಳಕೆದಾರರ ಸಂಘಕ್ಕೆ ಅಧಿಕಾರ ನೀಡುವುದು;

(viii) ನೀರು ಬಳಕೆದಾರರ ಸಂಘಗಳ ಅಧಿಕಾರ ವ್ಯಾಪ್ತಿಯೊಳಗೆ ಇರುವ ಜಮೀನುಗಳ ಸಂಬಂಧದಲ್ಲಿ ನಿರ್ವಹಣಾ ಉಪಕರವನ್ನು ವಿಧಿಸುವುದರಿಂದ ವಿನಾಯಿತಿಗೊಳಿಸುವುದು;

(ix) ಅಪರಾಧಗಳ ಸಂಬಂಧದಲ್ಲಿ ರಾಜಿ ಮಾಡಿಕೊಳ್ಳಲು ಉಪಬಂಧ ಕಲ್ಪಿಸುವುದು;

(x) ನೀರು ಬಳಕೆದಾರರ ಪರಿಹಾರಕ್ಕೆ ಉನ್ನತ ಮಟ್ಟದ ಮಹಾ ಮಂಡಲದ ಉಪಬಂಧ ಕಲ್ಪಿಸುವುದು;

(xi) ನೀರು ಬಳಕೆದಾರರ ಸಂಘ, ನೀರು ಬಳಕೆದಾರರ ವಿತರಣಾ ಮಟ್ಟದ ಮಹಾಮಂಡಲ, ನೀರು ಬಳಕೆದಾರರ ಯೋಜನಾ ಮಟ್ಟದ ಮಹಾಮಂಡಲ ಮತ್ತು ನೀರು ಬಳಕೆದಾರರ ಉನ್ನತ ಮಟ್ಟದ ಮಹಾಮಂಡಲ – ಇವುಗಳ ಪ್ರಕಾರ್ಯಗಳನ್ನು ರೂಪಿಸುವುದು.

ಅಲ್ಲದೆ, ಕರ್ನಾಟಕ ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957ನ್ನು ನೀರು ಬಳಕೆದಾರರ ಸಹಕಾರ ಸಂಘಗಳಿಗೆ ಮಾತ್ರ ಅಧಿನಿಯಮವು ಅನ್ವಯಿಸುವಂತೆ ನಿರ್ಬಂಧಿಸಲು ಮತ್ತು ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960ರ ಅಡಿಯಲ್ಲಿ ನೋಂದಾಯಿಸಲಾದ ಸಂಘಗಳಿಗೆ ನಿರ್ಬಂಧಿಸದಿರಲು ಅಧಿನಿಯಮವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಕೆಲವು ಆನುಷಂಗಿಕ ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾದುದರಿಂದ, ಮತ್ತು ಕರ್ನಾಟಕ ವಿಧಾನ ಪರಿಷತ್ತು ಅಧಿವೇಶನದಲ್ಲಿಲ್ಲದಿದ್ದುದರಿಂದ, ಕರ್ನಾಟಕ ನೀರಾವರಿ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧ್ಯಾದೇಶ, 2000 ಇದನ್ನು ಪ್ರಖ್ಯಾಪಿಸಲಾಯಿತು.

ಸದರಿ ಅಧ್ಯಾದೇಶದ ಬದಲಿಗೆ ವಿಧೇಯಕವನ್ನು ಮಂಡಿಸಬೇಕಾಗಿದೆ.

ಆದ್ದರಿಂದ ಈ ವಿಧೇಯಕ.

(2000ದ ವಿಧಾನಸಭಾ ವಿಧೇಯಕ ಸಂ. 29ರಿಂದ ಪಡೆಯಲಾಗಿದೆ.)

**XI**

**2002ರ ತಿದ್ದುಪಡಿ ಮಾಡುವ ಅಧಿನಿಯಮ 8.–** ಕರ್ನಾಟಕ ನೀರಾವರಿ ಅಧಿನಿಯಮ, 1965ನ್ನು ಸೂಕ್ತ ತಿದ್ದುಪಡಿ ಮಾಡುವ ಮೂಲಕ ನೀರು ಬಳಕೆದಾರರು, ನೀರು ಬಳಕೆದಾರರ ಯೋಜನಾ ಮಟ್ಟದ ಒಕ್ಕೂಟದ ಸದಸ್ಯರಾಗಲು ಉಪಬಂಧ ಕಲ್ಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಯಾವುದೇ ನೀರಾವರಿ ಕಾಮಗಾರಿಯಿಂದ ನೀರನ್ನು ಸರಬರಾಜು ಮಾಡುವ ಮತ್ತು ತನ್ಮೂಲಕ ನೀರು ದರಗಳನ್ನು ವಿಧಿಸುವ ಮತ್ತು ವಸೂಲಿ ಮಾಡುವ ಕೆಲಸವನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ವಹಿಸುವ ಸಲುವಾಗಿ ಕರ್ನಾಟಕ ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನದರ ವಿಧಿಸುವಿಕೆ) ಅಧಿನಿಯಮ, 1957ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಸಹ ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾಗಿದ್ದುದರಿಂದ ಮತ್ತು ವಿಧಾನಪರಿಷತ್ತು ಅಧಿವೇಶನದಲ್ಲಿಲ್ಲದಿದ್ದುದರಿಂದ, ಆ ಉದ್ದೇಶವನ್ನು ಸಾಧಿಸಲು, ಕರ್ನಾಟಕ ನೀರಾವರಿ ಮತ್ತು ಇತರ ಕೆಲವು ಕಾನೂನು (ತಿದ್ದುಪಡಿ) ಅಧ್ಯಾದೇಶ, 2001 (2001ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 6) ಇದನ್ನು ಪ್ರಖ್ಯಾಪಿಸಲಾಯಿತು.

ಆದ್ದರಿಂದ ಈ ವಿಧೇಯಕ.

(2002ರ ವಿಧಾನ ಸಭಾ ವಿಧೇಯಕ ಸಂಖ್ಯೆ 2)

**XII**

**2002ರ ತಿದ್ದುಪಡಿ ಮಾಡುವ ಅಧಿನಿಯಮ 9.–** ಈ ಮುಂದಿನವುಗಳನ್ನು ಉಪಬಂಧಿಸಲು, ಎಂದರೆ,– (i) "ನೀರು ಬಳಕೆದಾರರ ಸಂಘ" ಎಂಬುದಕ್ಕೆ ಒಂದು ಪ್ರತ್ಯೇಕ ಪರಿಭಾಷೆಯನ್ನು ಕಲ್ಪಿಸುವುದಕ್ಕಾಗಿ ಮತ್ತು ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960 ರ ಅಡಿಯಲ್ಲಿ ನೀರು ಬಳಕೆದಾರರ ಸಂಘವು ನೋಂದಣಿಯಾಗುವವರೆಗೆ 2000 ಹೆಕ್ಟೇರ್‌ಗಿಂತ ಕಡಿಮೆ ಭೂಮಿಗೆ ನೀರಾವರಿ ಸೌಕರ್ಯ ಕಲ್ಪಿಸುವ ಸಣ್ಣ ನೀರಾವರಿ ಕೆರೆಗಳಿಗೆ ಸಂಬಂಧಪಟ್ಟಂತೆ ಈ ತಿದ್ದುಪಡಿ ಅಧಿನಿಯಮ ಪ್ರಾರಂಭವಾಗುವುದಕ್ಕೆ ಮುಂಚೆ ನೋಂದಾವಣಿಯು ಅಸ್ತಿತ್ವದಲ್ಲಿರುವ ನೀರು ಬಳಕೆದಾರರ ಸಂಘಗಳ ಮುಂದುವರಿಕೆಗಾಗಿ ಉಪಬಂಧ ಕಲ್ಪಿಸುವುದು;

(ii) ನೀರು ಬಳಕೆದಾರರ ಸಂಘಕ್ಕೆ 4,10,14 ಮತ್ತು 27ನೇ ಪ್ರಕರಣಗಳ ಅಡಿಯಲ್ಲಿ ಕೆಲವು ಅಧಿಕಾರಗಳನ್ನು ಪ್ರದಾನ ಮಾಡುವುದು;

(iii) ನೀರು ಬಳಕೆದಾರರ ಸಂಘಕ್ಕೆ ನಿರ್ವಹಣಾ ಉಪಕರದಿಂದ ವಿನಾಯಿತಿ ನೀಡುವುದು;

(iv) ನೀರು ಬಳಕೆದಾರರ ಸಂಘದ ಪ್ರಕಾರ್ಯಗಳನ್ನು ಪರಿಭಾಷಿಸುವುದು

– ಕರ್ನಾಟಕ ನೀರಾವರಿ ಅಧಿನಿಯಮ, 1965ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ನೀರು ಬಳಕೆದಾರರ ಸಂಘದ ಮೇಲೆ ನೀರಿನ ದರ ವಿಧಿಸಲು ಮತ್ತು ಅದು ಪ್ರತಿಯಾಗಿ ನೀರು ಬಳಕೆದಾರರಿಂದ ನೀರಿನ ವೆಚ್ಚಗಳನ್ನು ಸಂಗ್ರಹಿಸಲು ಸಾಧ್ಯವಾಗುವಂತೆ ಮಾಡಲು ಕರ್ನಾಟಕ ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957ನ್ನು ಸಹ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾಗಿದ್ದುದರಿಂದ ಮತ್ತು ಕರ್ನಾಟಕ ವಿಧಾನಪರಿಷತ್ತು ಅಧಿವೇಶನದಲ್ಲಿ ಇಲ್ಲದಿದ್ದುದರಿಂದ ಈ ಉದ್ದೇಶವನ್ನು ಸಾಧಿಸಲು ಕರ್ನಾಟಕ ನೀರಾವರಿ ಮತ್ತು ಕೆಲವು ಇತರ ಕಾನೂನು (ತಿದ್ದುಪಡಿ) ಅಧ್ಯಾದೇಶ, 2002ನ್ನು (2002ರ ಕರ್ನಾಟಕ ಅಧ್ಯಾದೇಶ 1) ಪ್ರಖ್ಯಾಪಿಸಲಾಯಿತು.

ಆದ್ದರಿಂದ ಈ ವಿಧೇಯಕ.

(2002ರ ವಿಧಾನಸಭಾ ವಿಧೇಯಕ ಸಂಖ್ಯೆ 7)

**1957ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 28**

*(1957ರ ಅಕ್ಟೋಬರ್ ಮೂವತ್ತ ಒಂದನೇ ದಿನಾಂಕದಂದು [1][ಕರ್ನಾಟಕ ರಾಜ್ಯಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ.)*

**[1][ಕರ್ನಾಟಕ][1] ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957**

*(1957ರ ಅಕ್ಟೋಬರ್ ಇಪ್ಪತ್ನಾಲ್ಕನೇ ದಿನಾಂಕದಂದು ರಾಜ್ಯಪಾಲರ ಅನುಮೋದನೆಯನ್ನು ಪಡೆಯಲಾಗಿದೆ.)*

(ಕರ್ನಾಟಕ ಅಧಿನಿಯಮ 1961ರ 23, 1964ರ 8, 1965ರ 18, 1966ರ 13, 1968ರ 16, 1974ರ 29, 1995ರ 16, 1995ರ 21, 2000ದ 24, 2002ರ 8 ಮತ್ತು 2002ರ 9ರಿಂದ ತಿದ್ದುಪಡಿಯಾದಂತೆ.)

**[1][ಕರ್ನಾಟಕ ರಾಜ್ಯ][1] ದಲ್ಲಿ ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರಗಳನ್ನು ವಿಧಿಸುವ ಕಾನೂನುಗಳನ್ನು ಕ್ರೋಡೀಕರಿಸುವ ಮತ್ತು ತಿದ್ದುಪಡಿ ಮಾಡುವ ಅಧಿನಿಯಮ.**

[1][ಕರ್ನಾಟಕ ರಾಜ್ಯ][1] ದಲ್ಲಿ ಪುರೋಭಿವೃದ್ಧಿ ವಂತಿಗೆಯನ್ನು ಮತ್ತು ನೀರು ದರವನ್ನು ವಿಧಿಸುವುದಕ್ಕೆ ಸಂಬಂಧಿಸಿದ ಕಾನೂನುಗಳನ್ನು ಕ್ರೋಡೀಕರಿಸುವುದು ಮತ್ತು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಭಾರತ ಗಣರಾಜ್ಯದ ಎಂಟನೆಯ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**1. ಚಿಕ್ಕ ಹೆಸರು ಮತ್ತು ವ್ಯಾಪ್ತಿ.–** (1) ಈ ಅಧಿನಿಯಮವನ್ನು [1][ಕರ್ನಾಟಕ][1] ನೀರಾವರಿ (ಪುರೋಭಿವೃದ್ಧಿ ವಂತಿಗೆ ಮತ್ತು ನೀರಿನ ದರ ವಿಧಿಸುವಿಕೆ) ಅಧಿನಿಯಮ, 1957 ಎಂದು ಕರೆಯತಕ್ಕದ್ದು.

(2) ಇದು, ಇಡೀ [1][ ಕರ್ನಾಟಕ ರಾಜ್ಯ][1] ಕ್ಕೆ ವ್ಯಾಪ್ತವಾಗತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(3) ಇದು, ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂತಹ [1][ದಿನಾಂಕ][1] ದಂದು ಜಾರಿಗೆ ಬರತಕ್ಕದ್ದು.

1. ಈ ಅಧಿನಿಯಮವು ಅಧಿಸೂಚನೆಯ ಮೂಲಕ 1.9.1960ರಿಂದ ಜಾರಿಗೆ ಬಂದಿದೆ. ಸದರಿ ಅಧಿಸೂಚನೆಯ ಪಾಠವನ್ನು ಪುಟ 10 ರಲ್ಲಿ ನೀಡಲಾಗಿದೆ.

**2. ಪರಿಭಾಷೆಗಳು.** – (1) ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

[1][(ಎ) "ಜಿಲ್ಲಾಧಿಕಾರಿ" ಎಂದರೆ ಒಂದು ಜಿಲ್ಲೆಯ ಜಿಲ್ಲಾಧಿಕಾರಿ ಅಥವಾ ರಾಜ್ಯ ಸರ್ಕಾರವು ಈ ಅಧಿನಿಯಮದ ಅಡಿಯಲ್ಲಿ ಜಿಲ್ಲಾಧಿಕಾರಿಯ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕ ಮಾಡಬಹುದಾದ ಸಹಾಯಕ ಆಯುಕ್ತನ ದರ್ಜೆಗೆ ಕಡಿಮೆಯದಲ್ಲದ ದರ್ಜೆಯ ಅಂಥ ಇತರ ಅಧಿಕಾರಿ;][1]

1 1961ರ ಅಧಿನಿಯಮ 23ರ ಮೂಲಕ 16.11.1961ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ಬಿ) "ಪುರೋಭಿವೃದ್ಧಿ ವಂತಿಗೆ ವಿಧಿಸುವ ಅಧಿಕಾರಿ" ಎಂದರೆ ಸರ್ಕಾರವು ಯಾವುದೇ ಪ್ರದೇಶದ ಅಥವಾ ನೀರಾವರಿ ಕಾಮಗಾರಿಯ ಸಂಬಂಧದಲ್ಲಿ ಪುರೋಭಿವೃದ್ಧಿ ವಂತಿಗೆ ವಿಧಿಸುವ ಅಧಿಕಾರಿ ಎಂದು ನೇಮಕ ಮಾಡಬಹುದಾದಂಥ ಅಧಿಕಾರಿ;

1. 1964ರ ಅಧಿನಿಯಮ 8ರ ಮೂಲಕ 31.10.1957ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿಎ) "ವಂತಿಗೆ" ಎಂದರೆ 3 ಮತ್ತು 4ನೇ ಪ್ರಕರಣದ ಅಡಿಯಲ್ಲಿ [1][ಪುರೋಭಿವೃದ್ಧಿ ವಂತಿಗೆ][1] ಯಾಗಿ ಸಂದಾಯ ಮಾಡಬೇಕಾದ ತೆರಿಗೆ][1]

1. 1966ರ ಅಧಿನಿಯಮ 13ರ ಮೂಲಕ 1.9.1960ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) "ಚರಂಡಿ ಕಾಮಗಾರಿ" ಎಂಬುದು,–

(i) ನಿರುಪಯುಕ್ತ ಅಥವಾ ಹೆಚ್ಚುವರಿ ನೀರನ್ನು ಹೊರ ಹಾಕಲು ನೈಸರ್ಗಿಕವಾಗಿಯಾಗಲಿ ಅಥವಾ ಕೃತಕವಾಗಿಯಾಗಲಿ ಇರುವ ಕಾಲುವೆಗಳು ಮತ್ತು ಅದಕ್ಕೆ ಸಂಬಂಧಿಸಿದ ಹಾಗೂ ಸಹಾಯಕವಾದ ಅಂಥ ಕಾಮಗಾರಿಗಳ ಎಲ್ಲ ಕಾಮಗಾರಿಗಳು ;

(ii) ಒಂದು ನೀರಾವರಿ ಕಾಮಗಾರಿಯಿಂದ ನೀರನ್ನು ಹೊರ ಹಾಕುವ ಕಾಲುವೆಗಳು;

(iii) ಅಣೆಕಟ್ಟುಗಳು, ಕೋಡಿಗಳು, ತಡೆ ಒಡ್ಡುಗಳು, ತೂಬುಗಳು ಮತ್ತು ತಡೆಗಟ್ಟುಗಳನ್ನು;

(iv) ಸರ್ಕಾರದ ಒಡೆತನ ಅಥವಾ ನಿಯಂತ್ರಣದಲ್ಲಿರುವ ಜಮೀನನ್ನು, ಪ್ರವಾಹ ಅಥವಾ ಭೂ ಸವೆತದಿಂದ ಸಂರಕ್ಷಿಸಲು ಕೈಗೊಳ್ಳುವ ಎಲ್ಲ ಕಾಮಗಾರಿಗಳು ಒಳಗೊಳ್ಳುತ್ತವೆ. ಆದರೆ, ತ್ಯಾಜ್ಯ ವಸ್ತುಗಳನ್ನು ಹೊರಹಾಕುವ ಕಾಮಗಾರಿಗಳು ಇದರಲ್ಲಿ ಸೇರುವುದಿಲ್ಲ;

(ಡಿ) "ಸರ್ಕಾರ" ಎಂದರೆ ರಾಜ್ಯ ಸರ್ಕಾರ;

(ಇ) "ನೀರಾವರಿ ಕಾಮಗಾರಿ" ಎಂಬುದು ಈ ಮುಂದಿನವುಗಳನ್ನು ಒಳಗೊಳ್ಳುತ್ತದೆ,–

(i) ನೀರು ಪೂರೈಕೆಗಾಗಿ ಅಥವಾ ಸಂಗ್ರಹಕ್ಕಾಗಿ ಬಳಸುವ ಎಲ್ಲ ನಾಲೆಗಳು, ಕಾಲುವೆಗಳು, ಕೆರೆಗಳು, ಬಾವಿಗಳು, ಜಲಾಶಯಗಳು, ಅಣೆಕಟ್ಟುಗಳು, ಬಾಂಧಾರಗಳು, ಕೊಳಗಳು, ಚಿಲುಮೆಕೊಳಗಳು, ಕುಂಟೆಗಳು, ತಲಪರಿಗೆಗಳು ಮತ್ತು ಮಡುಗಳು ಮತ್ತು ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ನೀರೆತ್ತುವ ಸಾಧನಗಳ ಸ್ಥಾಪನೆ, ಅದಕ್ಕೆ ಜೋಡಿಸಿದ ಅಥವಾ ಪೂರಕವಾದ ನೀರು ಪೂರೈಸುವ ಮತ್ತು ಹೊರಹಾಕುವ ಕಾಲುವೆ ಸೇರಿದಂತೆ ಎಲ್ಲ ಕಾಮಗಾರಿಗಳು, ಏರಿತಡೆಗಳು ಮತ್ತು ರಚನೆಗಳು, ಸ್ಥಾಪನೆಗಳು;

(ii) ಸರ್ಕಾರದ ಆಸ್ತಿಯಾಗಿರುವ ಜಮೀನುಗಳ ಮೇಲೆ ಇರುವ ಅಂಥ ಎಲ್ಲ ಕೊಳಗಳು ಮತ್ತು ನೈಸರ್ಗಿಕ ನೀರು ಸಂಗ್ರಹಗಳು ಅಥವಾ ಅದರ ಭಾಗಗಳು;

(iii) ಎಲ್ಲ ನೈಸರ್ಗಿಕ ಜಲ ಮಾರ್ಗಗಳು, ನದಿಗಳು ಮತ್ತು ತೊರೆಗಳು ಅಥವಾ ಅದರ ಭಾಗಗಳು;

(ಎಫ್) ಭೂ ಹಿಡುವಳಿದಾರ ಅಥವಾ ಹಿಡುವಳಿದಾರ ಎಂಬುದು, ವ್ಯಕ್ತಿಯ ಸ್ವಂತ ಹೆಸರಿನಲ್ಲಾಗಲಿ ಅಥವಾ ಮತ್ತೊಬ್ಬ ವ್ಯಕ್ತಿಗಾಗಿ ಅಥವಾ ವ್ಯಕ್ತಿಗಳ ಒಂದು ವರ್ಗಕ್ಕೆ ಅಥವಾ ಸಾರ್ವಜನಿಕರಿಗಾಗಿ ನ್ಯಾಸದಲ್ಲಿ ಪೂರ್ಣವಾಗಿಯಾಗಲಿ ಅಥವಾ ಭಾಗಶ:ವಾಗಿಯಾಗಲಿ ಜಮೀನನ್ನು ಹೊಂದುವ ಹಕ್ಕು ನಿಹಿತವಾಗಿರುವ ವ್ಯಕ್ತಿಯನ್ನು ಸೂಚಿಸುತ್ತದೆ ಮತ್ತು ಇದು ಸ್ವಾಧೀನಾನುಭವದ ಹಕ್ಕು ನಿಹಿತವಾಗಿರುವ ಒಬ್ಬ ಅಡಮಾನದಾರನನ್ನು ಒಳಗೊಳ್ಳುತ್ತದೆ:

ಪರಂತು, ದಕ್ಷಿಣ ಕನ್ನಡ ಜಿಲ್ಲೆಯ ಒಳವರ್ಗದಾರ, ಖಾಯಂ ಗೇಣಿದಾರ, ಖಾಯಂ ಬಾಡಿಗೆದಾರ ಅಥವಾ ಮೂಲಗೇಣಿದಾರನ ಸ್ವಾಧೀನದಲ್ಲಿರುವ ಯಾವುದೇ ಜಮೀನಿಗೆ ಸಂಬಂಧಪಟ್ಟಂತೆ, ಸಂದರ್ಭಾನುಸಾರ, ಅಂಥ ಒಳವರ್ಗದಾರನನ್ನು ಖಾಯಂ ಗೇಣಿದಾರನನ್ನು, ಖಾಯಂ ಬಾಡಿಗೆದಾರ ಅಥವಾ ಮೂಲ ಬಾಡಿಗೆದಾರನನ್ನು ಭೂ ಹಿಡುವಳಿದಾರನೆಂದು ಭಾವಿಸತಕ್ಕದ್ದು.

[1][(ಎಫ್‌ಎ), (ಎಫ್‌ಬಿ), (ಎಫ್‌ಸಿ) xxx;][1]

1. 1966ರ ಅಧಿನಿಯಮ ಸಂಖ್ಯೆ 13ರ ಮೂಲಕ 01.09.1960ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಜಿ) "ಅಧಿಸೂಚನೆ" ಎಂದರೆ ರಾಜ್ಯ ಪತ್ರದಲ್ಲಿ ಪ್ರಕಟಿಸಲಾದ ಒಂದು ಸರ್ಕಾರಿ ಅಧಿಸೂಚನೆ;

(ಎಚ್) "ನಿಯಮಿಸಲಾದುದು" ಎಂದರೆ ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳಿಂದ ನಿಯಮಿಸಲಾದುದು.

[1][(ಎಚ್‌ಎ) "ನಿಯಮಿಸಲಾದ ಅಧಿಕಾರಿ" ಎಂದರೆ ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ನಿರ್ದಿಷ್ಟಪಡಿಸಲಾದ ಅಧಿಕಾರಿ ಮತ್ತು ಬೇರೆ ಬೇರೆ ಪ್ರದೇಶಗಳಿಗೆ, ನೀರಾವರಿ ಕಾಮಗಾರಿಗಳಿಗೆ ಅಥವಾ ಉದ್ದೇಶಗಳಿಗೆ ಬೇರೆ ಬೇರೆ ಅಧಿಕಾರಿಗಳನ್ನು ನಿರ್ದಿಷ್ಟಪಡಿಸಬಹುದು;][1]

1. 1968ರ ಅಧಿನಿಯಮ ಸಂಖ್ಯೆ 4ರ ಮೂಲಕ 31.10.1957 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(ಐ) "ಕಾಮಗಾರಿ" ಎಂದರೆ ಪೂರ್ಣಗೊಂಡಿರುವ ಅಥವಾ ಪೂರ್ಣಗೊಂಡಿಲ್ಲದ ನೀರಾವರಿ ಅಥವಾ ಚರಂಡಿ ಕಾಮಗಾರಿ.

[1][(2) xxxx][1]

1. 1961ರ ಅಧಿನಿಯಮ 23ರ ಮೂಲಕ 16.11.1961ರಿಂದ ಜಾರಿಗೆ ಬರುವಂತೆ ಬಿಟ್ಟು ಬಿಡಲಾಗಿದೆ.

**3. ಪುರೋಭಿವೃದ್ಧಿ ವಂತಿಗೆಯನ್ನು ವಿಧಿಸುವುದು.–** [1][(1) ಈ ಅಧಿನಿಯಮದ ಪ್ರಾರಂಭದ ನಂತರವಾಗಲಿ ಅಥವಾ ಅಂಥ ಪ್ರಾರಂಭಕ್ಕೆ ಮುಂಚಿನ ಆದರೆ, –

1. 1964ರ ಅಧಿನಿಯಮ 8ರ ಮೂಲಕ 31.10.1957ರಿಂದ ಜಾರಿಗೆ ಬರುವಂತೆ ಪುನರ್ ಸಂಖ್ಯೆ ನೀಡಲಾಗಿದೆ ಮತ್ತು ಪ್ರತಿಯೋಜಿಸಲಾಗಿದೆ.

(i) ಮೈಸೂರು ಪ್ರದೇಶದಲ್ಲಿ 1944ರ ಜನವರಿ ಒಂದನೇ ದಿನಾಂಕಕ್ಕೆ ;

(ii) [1][ಮಂಗಳೂರು ಮತ್ತು ಕೊಳ್ಳೇಗಾಲ ಪ್ರದೇಶ][1] ದಲ್ಲಿ 1947ರ ಜನವರಿ ಒಂದನೇ ದಿನಾಂಕಕ್ಕೆ;

(iii) [1][ಗುಲ್ಬರ್ಗಾ ಪ್ರದೇಶ][1] ದಲ್ಲಿ 1947ರ ಒಂದನೇ ಆಗಸ್ಟ್ ದಿನಾಂಕಕ್ಕೆ ; ಮತ್ತು

(iv) [1][ಬೆಳಗಾವಿ ಪ್ರದೇಶ][1] ದಲ್ಲಿ ಮತ್ತು ಕೊಡಗು ಜಿಲ್ಲೆಯಲ್ಲಿ 1950ರ ಜನವರಿ ಒಂದನೇ ದಿನಾಂಕಕ್ಕೆ

– ಮುಂಚಿನದಲ್ಲದ ಯಾವುದೇ ಕಾಲದಲ್ಲಾಗಲಿ ಸರ್ಕಾರವು ಮಾಡಿದ ಯಾವುದೇ ನಿರ್ಮಾಣದಿಂದ, ಜೀರ್ಣೋದ್ಧಾರದಿಂದ, ವಿಸ್ತರಣೆಯಿಂದ ಅಥವಾ ಬದಲಾವಣೆಯಿಂದ [2][ಪ್ರಯೋಜನ ಹೊಂದಿದ ಭೂ ಹಿಡುವಳಿದಾರನಿಂದ ಅಥವಾ ಯಾವುದೇ ಭೂಮಿಯ ಹಿಡುವಳಿದಾರನಿಂದ][2] ಪುರೋಭಿವೃದ್ಧಿ ವಂತಿಗೆ ಎಂದು ಕರೆಯಲಾಗುವ ಒಂದು ತೆರಿಗೆಯನ್ನು [2][ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ][2] ವಿಧಿಸತಕ್ಕದ್ದು.][2]

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. 1966ರ ಅಧಿನಿಯಮ 13 ರ ಮೂಲಕ 1.9.1960 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

***ವಿವರಣೆ –I*** ಪ್ರಯೋಜನವನ್ನು ಉಪಯೋಗಿಸಿಕೊಳ್ಳದಿದ್ದಾಗ್ಯೂ ಜಮೀನು ಪ್ರಯೋಜನ ಹೊಂದಿದೆ ಎಂದು ಭಾವಿಸತಕ್ಕದ್ದು, ಆದರೆ, ಅಂಥ ಪ್ರಯೋಜನ ಬಳಸಿಕೊಳ್ಳದೇ ಇದ್ದುದಕ್ಕೆ ಅಂಥ ಜಮೀನಿನಲ್ಲಿ ಹಿತಾಸಕ್ತಿ ಹೊಂದಿದ ವ್ಯಕ್ತಿಯ ಅಥವಾ ವ್ಯಕ್ತಿಗಳ ಕ್ರಿಯೆ ಅಥವಾ ನಿಷ್ಕ್ರಿಯೆ ಮಾತ್ರವೇ ಕಾರಣವಾಗಿರುತ್ತದೆ;

***ವಿವರಣೆ–II*** ಸರ್ಕಾರದ ವೆಚ್ಚದಲ್ಲಿ ಪೂರ್ಣವಾಗಿಯಾಗಲಿ ಅಥವಾ ಭಾಗಶ:ವಾಗಿಯಾಗಲಿ ಈಗಿರುವ ಕಾಮಗಾರಿಯ ಸಾಮಾನ್ಯ ದುರಸ್ತಿಗಳು ಮತ್ತು ನಿರ್ವಹಣೆಯ ಕಾರಣ ಮಾತ್ರದಿಂದಲೇ ಜಮೀನು ಪ್ರಯೋಜನ ಹೊಂದಿದೆಯೆಂದು ಭಾವಿಸತಕ್ಕದ್ದಲ್ಲ.

[1]***[ವಿವರಣೆ–III*** ಈ ಉಪ ಪ್ರಕರಣದಲ್ಲಿ, "ಸರ್ಕಾರ" ಎಂಬ ಪದವು, ಆಂಧ್ರ ರಾಜ್ಯ ಅಧಿನಿಯಮ, 1953ರ (1953ರ ಕೇಂದ್ರ ಅಧಿನಿಯಮ 30) 66ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಪ್ರಾಧಿಕಾರವನ್ನು ಒಳಗೊಳ್ಳುವುದೆಂದು ಭಾವಿಸತಕ್ಕದ್ದು.][1]

[1][(2) ಅಭಿವೃದ್ಧಿ ವಂತಿಗೆ ವಿಧಿಸುವ ಉದ್ದೇಶಗಳಿಗಾಗಿ, ನಿರ್ದಿಷ್ಟಪಡಿಸಲಾದ ಅಧಿಕಾರಿಯು ಅಧಿಸೂಚನೆಯ ಮೂಲಕ, –

1. 1964ರ ಅಧಿನಿಯಮ 8ರ ಮೂಲಕ 31.10.1957ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(i) ಯಾವುದೇ ನೀರಾವರಿ ಕಾಮಗಾರಿಯ ನಿರ್ಮಾಣ, ಜೀರ್ಣೋದ್ಧಾರ, ವಿಸ್ತರಣೆ ಅಥವಾ ಬದಲಾವಣೆಯ ಪ್ರಾರಂಭದ ಮತ್ತು ಪೂರ್ಣಗೊಳ್ಳುವ ದಿನಾಂಕಗಳನ್ನು ;

[1][(ii), (iii) xxx][1]

1. 1966 ರ ಅಧಿನಿಯಮ 13 ರ ಮೂಲಕ 1.9.1960 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

– ನಿರ್ದಿಷ್ಟಪಡಿಸತಕ್ಕದ್ದು ಮತ್ತು ಒಂದೇ ನೀರಾವರಿ ಕಾಮಗಾರಿಯಿಂದ ಪ್ರಯೋಜನ ಪಡೆದ ವಿವಿಧ ಜಮೀನುಗಳಿಗೆ ಸಂಬಂಧಿಸಿದಂತೆ, ಅಂಥ ಜಮೀನುಗಳಿಗೆ ನೀರು ಒದಗಿಸುವ ದಿನಾಂಕಗಳನ್ನು ಅವಲಂಬಿಸಿ, ಯಾವುದೇ ನೀರಾವರಿ ಕಾಮಗಾರಿಯು ಪ್ರಾರಂಭವಾಗುವ ಹಾಗೂ ಪೂರ್ಣಗೊಳ್ಳುವ ಬೇರೆ ಬೇರೆ ದಿನಾಂಕಗಳನ್ನು ನಿರ್ದಿಷ್ಟಪಡಿಸಬಹುದು.

(3) ಸರ್ಕಾರವು ತಾನಾಗಿಯೇ ಆಗಲಿ, ಅಥವಾ (2)ನೇ ಉಪ ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಅಧಿಸೂಚನೆಯಿಂದ ಬಾಧಿತನಾದ ಯಾರೇ ಭೂ ಹಿಡುವಳಿದಾರನ ಅರ್ಜಿಯ ಮೇಲೆ ಆಗಲಿ, ಯಾವುದೇ ಅಂಥ ಅಧಿಸೂಚನೆಯಲ್ಲಿ ಯಾವುದೇ ದೋಷ ಇದೆ ಎಂಬ ಬಗ್ಗೆ ಮನದಟ್ಟಾದರೆ, ತಾನು ಸೂಕ್ತವೆಂದು ಭಾವಿಸುವಂಥ ಅಧಿಸೂಚನೆಯ ಮಾರ್ಪಾಟನ್ನು ನಿರ್ದೇಶಿಸಬಹುದು ಮತ್ತು ಅಧಿಸೂಚನೆಯನ್ನು ತದನುಸಾರವಾಗಿ ನಿಯಮಿಸಲಾದ ಅಧಿಕಾರಿಯು ಮಾರ್ಪಾಟು ಮಾಡತಕ್ಕದ್ದು.][1]

[1][4. **ಪುರೋಭಿವೃದ್ಧಿ ವಂತಿಗೆ ಮೊತ್ತ.–** (1) 3ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ಯಾವುದೇ ಜಮೀನಿನ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಪುರೋಭಿವೃದ್ಧಿ ವಂತಿಗೆಯ ಮೊತ್ತವು, ನೀರಾವರಿ ಕಾಮಗಾರಿಯ ನಿರ್ಮಾಣ, ಜೀರ್ಣೋದ್ಧಾರ, ವಿಸ್ತರಣೆ ಅಥವಾ ಬದಲಾವಣೆಯು ಪ್ರಾರಂಭಗೊಂಡ ದಿನಾಂಕಕ್ಕೆ ಮೊದಲಿನ ಅಂಥ ಜಮೀನಿನ ಮಾರುಕಟ್ಟೆ ಮೌಲ್ಯ ಮತ್ತು ಅಂತಹ ನಿರ್ಮಾಣ, ಜೀರ್ಣೋದ್ಧಾರ, ವಿಸ್ತರಣೆ ಅಥವಾ ಬದಲಾವಣೆಯು ಪೂರ್ಣಗೊಂಡ ತರುವಾಯದ ದಿನಾಂಕಕ್ಕೆ ಇದ್ದ ಮಾರುಕಟ್ಟೆ ಮೌಲ್ಯ – ಇವುಗಳ ನಡುವಿನ ವ್ಯತ್ಯಾಸದ ಅರ್ಧದಷ್ಟು ಮೊತ್ತಕ್ಕೆ ಸಮನಾಗಿರತಕ್ಕದ್ದು:

ಪರಂತು, ಯಾವುದೇ ಜಮೀನಿನ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಪುರೋಭಿವೃದ್ಧಿ ವಂತಿಗೆಯ ಮೊತ್ತವು ಪ್ರತಿ ಎಕರೆಗೆ [2][ಒಂದು ಸಾವಿರದ ಐದು ನೂರು ರೂಪಾಯಿಗಳ][2] ಗಿಂತ ಹೆಚ್ಚಾಗಿರತಕ್ಕದ್ದಲ್ಲ:

1. 1966 ರ ಅಧಿನಿಯಮ 13 ರ ಮೂಲಕ 1.9.1960 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1974ರ ಅಧಿನಿಯಮ 29ರ ಮೂಲಕ 1.9.1960ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಮತ್ತೂ ಪರಂತು,–

(i) ವ್ಯವಸಾಯ ಯೋಗ್ಯವಲ್ಲದ (ಖರಾಬ್);

(ii) ಒಂದು ನೂರು ಎಕರೆಗಿಂತ ಹೆಚ್ಚಿನ ಜಮೀನಿಗೆ ನೀರಾವರಿ ಒದಗಿಸಲು ಸಾಧ್ಯವಾಗದಂಥ, ಕೆರೆ, ಬಾವಿ, ಜಲಾಶಯ, ಅಣೆಕಟ್ಟು, ಬಾಂಧಾರ, ಕೊಳ, ಚಿಲುಮೆ ಕೊಳ, ಕುಂಟೆ, ತಲಪರಿಗೆ ಅಥವಾ ಮಡುವಿನ ಪ್ರಯೋಜನ ಪಡೆದ ನಿರ್ಮಾಣ, ಜೀರ್ಣೋದ್ಧಾರ, ವಿಸ್ತರಣೆ ಅಥವಾ ಬದಲಾವಣೆ ಹೊಂದಿದ

–ಭೂಮಿಯ ಸಂಬಂಧದಲ್ಲಿ ಯಾವುದೇ ಪುರೋಭಿವೃದ್ಧಿ ವಂತಿಗೆಯನ್ನು ವಿಧಿಸತಕ್ಕದ್ದಲ್ಲ:

ಅಲ್ಲದೆ ಪರಂತು, ಈ ಉಪಪ್ರಕರಣದ ಉದ್ದೇಶಗಳಿಗಾಗಿ ಭೂ–ಹಿಡುವಳಿದಾರನು ಜಮೀನಿನಲ್ಲಿ ಮಾಡಿದ ಯಾವುದೇ ಸುಧಾರಣೆಯಿಂದಾಗಿ ಮಾರುಕಟ್ಟೆಯ ಮೌಲ್ಯದಲ್ಲಿ ಉಂಟಾದ ಹೆಚ್ಚಳವನ್ನು ಬಿಟ್ಟುಬಿಡತಕ್ಕದ್ದು.

(2) ಯಾವುದೇ ನೀರಾವರಿ ಕಾಮಗಾರಿಯ ಸಂಬಂಧದಲ್ಲಿ, 3ನೇ ಪ್ರಕರಣದ (2) ನೇ ಉಪಪ್ರಕರಣದ ಅಡಿಯಲ್ಲಿ ಅಧಿಸೂಚನೆಯನ್ನು ಪ್ರಕಟಿಸಿದ ತರುವಾಯ, ಸಾಧ್ಯವಾದಷ್ಟು ಬೇಗನೆ, ಪುರೋಭಿವೃದ್ಧಿ ವಂತಿಗೆಯನ್ನು ವಿಧಿಸುವ ಅಧಿಕಾರಿಯು, (1)ನೇ ಉಪ ಪ್ರಕರಣದ ಉಪಬಂಧಗಳಿಗನುಸಾರವಾಗಿ, ಪುರೋಭಿವೃದ್ಧಿ ವಂತಿಗೆಯನ್ನು ಸಂದಾಯ ಮಾಡಬೇಕಾದ ನೀರಾವರಿ ಕಾಮಗಾರಿ ಅಚ್ಚುಕಟ್ಟಿನಲ್ಲಿ ನೀರಾವರಿಗೆ ಒಳಪಡುವ ಜಮೀನುಗಳನ್ನು ಮತ್ತು ನೀರಾವರಿಗೊಳಪಡಬಹುದಾದ ವಿವಿಧ ಜಮೀನುಗಳ ವ್ಯಾಪ್ತಿಯನ್ನು ತೋರಿಸುವ ಒಂದು ವಿವರಣ ಪಟ್ಟಿಯನ್ನು ತಯಾರಿಸತಕ್ಕದ್ದು.

(3) ಹಾಗೆ ತಯಾರಿಸಿದ ವಿವರಣೆ ಪಟ್ಟಿಯನ್ನು, ಸಾರ್ವಜನಿಕ ನೋಟೀಸಿನೊಂದಿಗೆ ಗ್ರಾಮಛಾವಡಿಯಲ್ಲಿ ಮತ್ತು ತಾಲ್ಲೂಕು ಕಛೇರಿಯಲ್ಲಿ ಮತ್ತು ನಿಯಮಿಸಬಹುದಾದಂಥ ಇತರ ರೀತಿಯಲ್ಲಿ ಪ್ರಕಟಿಸತಕ್ಕದ್ದು. ಅಂಥ ನೋಟೀಸಿನಲ್ಲಿ ನೀರಾವರಿಗೊಳಪಡುವ ಅಚ್ಚುಕಟ್ಟಿನಲ್ಲಿರುವ ಭೂ ಹಿಡುವಳಿದಾರರು ಅದರಲ್ಲಿ ತಿಳಿಸಿದ ವೇಳೆಯಲ್ಲಿ ಮತ್ತು ಅಂಥ ಸ್ಥಳದಲ್ಲಿ

(ಅಂತಹ ವೇಳೆಯು ನೋಟೀಸು ಪ್ರಕಟಗೊಂಡ ದಿನಾಂಕದಿಂದ ಒಂದು ತಿಂಗಳಿಗಿಂತ ಮೊದಲು ಆಗಿರತಕ್ಕದ್ದಲ್ಲ) ವೈಯುಕ್ತಿಕವಾಗಿಯಾಗಲಿ ಅಥವಾ ಏಜೆಂಟನ ಮೂಲಕವಾಗಿಯಾಗಲಿ ಪುರೋಭಿವೃದ್ಧಿ ವಂತಿಗೆ ಅಧಿಕಾರಿಯ ಮುಂದೆ ಹಾಜರಾಗುವಂತೆ ಮತ್ತು,–

(ಎ) ಅವರು,–

(i) ನೀರಾವರಿ ಕಾಮಗಾರಿಯ ಅಚ್ಚುಕಟ್ಟಿನಲ್ಲಿ ನೀರಾವರಿಗೊಳಪಡುವ ಜಮೀನುಗಳೆಂದು ಜಮೀನುಗಳ ವಿವರಣೆಯಲ್ಲಿ ಸೇರಿಸಿದುದಕ್ಕೆ;

(ii) ನೀರಾವರಿಗೊಳಪಡುವ ಯಾವುದೇ ನಿರ್ದಿಷ್ಟ ಸ್ವರೂಪದ ಅಥವಾ ವ್ಯಾಪ್ತಿಯ ಜಮೀನುಗಳೆಂದು ಜಮೀನುಗಳನ್ನು ವಿವರಣೆಯಲ್ಲಿ ಸೇರಿಸಿದುದಕ್ಕೆ

– ತಮ್ಮ ಆಕ್ಷೇಪಣೆಗಳನ್ನು ತಿಳಿಸುವಂತೆ; ಮತ್ತು

(ಬಿ) ಪುರೋಭಿವೃದ್ಧಿ ವಂತಿಗೆಗಳನ್ನು ಸಂದಾಯ ಮಾಡುವಾಗ, ಲೆಕ್ಕ ಹಾಕಲಾದ ಪುರೋಭಿವೃದ್ಧಿ ವಂತಿಗೆಯ ಮೊಬಲಗನ್ನು ಯಾವ ಆಧಾರದ ಮೇಲೆ ಕ್ಲೇಮು ಮಾಡಲಾಗಿದೆ ಎಂಬುದನ್ನು ತಿಳಿಸುವಂತೆ

– ಅಗತ್ಯಪಡಿಸತಕ್ಕದ್ದು,

ಅವನಾಗಲಿ ಅಥವಾ ಅವನ ಏಜೆಂಟನಾಗಲಿ ಅಂಥ ಲಿಖಿತ ವಿವರಣೆಯನ್ನು ಸಲ್ಲಿಸತಕ್ಕದ್ದು ಮತ್ತು ಅದಕ್ಕೆ ಸಹಿ ಮಾಡತಕ್ಕದ್ದು.

[1][(4) ಪುರೋಭಿವೃದ್ಧಿ ವಂತಿಗೆ ಅಧಿಕಾರಿಯು, [2][ಕರ್ನಾಟಕ][2] ಭೂ–ಕಂದಾಯ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 12) 30ನೇ ಪ್ರಕರಣದಲ್ಲಿ ನೋಟೀಸುಗಳನ್ನು ಉಪಬಂಧಿಸಲಾದ ರೀತಿಯಲ್ಲಿಯೇ ಭೂ ಹಿಡುವಳಿದಾರನಿಗೆ ನೋಟೀಸನ್ನು ಜಾರಿ ಮಾಡತಕ್ಕದ್ದು.][1]

1. 1974ರ ಅಧಿನಿಯಮ 29 ರ ಮೂಲಕ 22.06.1974 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 01.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(5) (3)ನೇ ಉಪಪ್ರಕರಣದ ಅಡಿಯಲ್ಲಿ ನಿಗದಿಪಡಿಸಿದ ದಿನಾಂಕದಂದು ಅಥವಾ ವಿಚಾರಣೆಯನ್ನು ಮುಂದೂಡಬಹುದಾದ ದಿನಾಂಕದಂದು, ಪುರೋಭಿವೃದ್ಧಿ ವಂತಿಗೆ ಅಧಿಕಾರಿಯು, [1][ಕರ್ನಾಟಕ][1] ಭೂ–ಕಂದಾಯ ಅಧಿನಿಯಮ, 1964ರಲ್ಲಿ ಉಪಬಂಧಿಸಿದ ವಿಧಾನದಲ್ಲಿ ವಿಧ್ಯುಕ್ತ ವಿಚಾರಣೆಯನ್ನು ನಡೆಸಿದ ತರುವಾಯ ಮತ್ತು (3)ನೇ ಉಪಪ್ರಕರಣದ ಅಡಿಯಲ್ಲಿ ಒಂದು ವಿವರಣ ಪತ್ರವನ್ನು ಸಲ್ಲಿಸಿದ ಪ್ರತಿಯೊಬ್ಬ ವ್ಯಕ್ತಿಗೂ ಅಹವಾಲು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡಿದ ತರುವಾಯ,–

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 01.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ಎ) ನೀರಾವರಿ ಕಾಮಗಾರಿಯ ನಿರ್ಮಾಣ, ಜೀರ್ಣೋದ್ಧಾರ, ವಿಸ್ತರಣೆ ಅಥವಾ ಬದಲಾವಣೆಯು ಪೂರ್ಣಗೊಂಡ ಮೇಲೆ ಜಮೀನಿನ ಮೌಲ್ಯದಲ್ಲಿ ಉಂಟಾದ ಹೆಚ್ಚಳವನ್ನು;

(ಬಿ) ಸದರಿ ಜಮೀನಿನ ಸಂಬಂಧದಲ್ಲಿ ಸಂದಾಯ ಮಾಡಬೇಕಾದ ಪುರೋಭಿವೃದ್ಧಿ ವಂತಿಗೆಯ ಮೊಬಲಗನ್ನು; ಮತ್ತು

(ಸಿ) ಅಂಥ ಪುರೋಭಿವೃದ್ಧಿ ವಂತಿಗೆಯನ್ನು ಸಂದಾಯ ಮಾಡಬೇಕಾದ ದಿನಾಂಕವನ್ನು

– ನಿರ್ದಿಷ್ಟಪಡಿಸಿ ಒಂದು ಆದೇಶವನ್ನು ಮಾಡತಕ್ಕದ್ದು.

(6) ಸರ್ಕಾರವು ಅಥವಾ (5)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿಯು, ಆದೇಶದ ದಿನಾಂಕದಿಂದ ಅರವತ್ತು ದಿನಗಳೊಳಗೆ ಜಮೀನು ಇರುವ ಪ್ರದೇಶದ ಮೇಲೆ ಅಧಿಕಾರವ್ಯಾಪ್ತಿ ಹೊಂದಿರುವ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸಬಹುದು ಮತ್ತು ಅಪೀಲಿಗೆ ಸಂಬಂಧಿಸಿದಂತೆ ಸಿವಿಲ್ ನ್ಯಾಯಾಲಯವು, ತಾನು ಸೂಕ್ತವೆಂದು ಭಾವಿಸಬಹುದಾದಂಥ ಆದೇಶಗಳನ್ನು ಮಾಡತಕ್ಕದ್ದು.

(7) (6) ನೇ ಉಪಪ್ರಕರಣದ ಅಡಿಯಲ್ಲಿ ಸಲ್ಲಿಸಿದ ಒಂದು ಅಪೀಲಿನ ಒಂದು ಮೇಲೆ ಸಿವಿಲ್ ನ್ಯಾಯಾಧೀಶನ ನ್ಯಾಯಾಲಯವು ಮಾಡಿದ ಯಾವುದೇ ಆದೇಶಕ್ಕೆ ಮತ್ತು ಸಿವಿಲ್ ನ್ಯಾಯಾಧೀಶನ ನ್ಯಾಯಾಲಯದ ಮೇಲ್ಕಂಡ ಆದೇಶಕ್ಕೆ ಒಳಪಟ್ಟು, (5)ನೇ ಉಪಪ್ರಕರಣದ ಅಡಿಯಲ್ಲಿನ ಪುರೋಭಿವೃದ್ಧಿ ವಂತಿಗೆ ಅಧಿಕಾರಿಯ ಆದೇಶವು ಅಂತಿಮವಾಗಿರತಕ್ಕದ್ದು, ಮತ್ತು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಲು ಬದ್ಧವಾಗಿರತಕ್ಕದ್ದಲ್ಲ.][1]

**5. ವಂತಿಗೆಯು ಸಂದಾಯವಾಗಬೇಕಾದ ಸಮಯ.–** (1) [1][4ನೇ ಪ್ರಕರಣದ (4)ನೇ ಉಪ ಪ್ರಕರಣದ ಅಡಿಯಲ್ಲಿನ ನೋಟೀಸನ್ನು ಜಾರಿ ಮಾಡುವ ರೀತಿಯಲ್ಲಿಯೇ,][1] ಭೂ ಹಿಡುವಳಿದಾರನ ಮೇಲೆ [2][ಪುರೋಭಿವೃದ್ಧಿ ವಂತಿಗೆ ಅಧಿಕಾರಿಯು][2] ಜಾರಿ ಮಾಡಬೇಕಾದ ಲಿಖಿತ ತಗಾದೆ ನೋಟೀಸಿನ ಜಾರಿಯ ಮೇಲೆ, ಈ ಅಧಿನಿಯಮದ ಅಡಿಯಲ್ಲಿನ [2][ಆ [3][ವಂತಿಗೆಯು][3]][2] ಸಂದಾಯ ಮಾಡಬಹುದಾಗಿರತಕ್ಕದ್ದು:

1. 1974ರ ಅಧಿನಿಯಮ 29 ರ ಮೂಲಕ 22.06.1974 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1964ರ ಅಧಿನಿಯಮ 8ರ ಮೂಲಕ 31.10.1957ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1966ರ ಅಧಿನಿಯಮ 13ರ ಮೂಲಕ 1.9.1960ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][ಪರಂತು, 4ನೇ ಪ್ರಕರಣದ (5)ನೇ ಉಪಪ್ರಕರಣದ ಅಡಿಯಲ್ಲಿ ಮಾಡಿದ ಆದೇಶವು ಅಂತಿಮಗೊಳ್ಳದೆ ಯಾವುದೇ ತಗಾದೆ ನೋಟೀಸನ್ನು ಭೂ ಹಿಡುವಳಿದಾರನಿಗೆ ಜಾರಿ ಮಾಡತಕ್ಕದ್ದಲ್ಲ.][1]

1. 1966ರ ಅಧಿನಿಯಮ 13ರ ಮೂಲಕ 1.9.1960ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

(2) ಸಂದೇಹಗಳನ್ನು ತೊಡೆಯಲು ಜಮೀನಿನಲ್ಲಿ ಹಿತಾಸಕ್ತಿ ಹೊಂದಿರುವ ಭೂ ಹಿಡುವಳಿದಾರನಲ್ಲದ ಅಥವಾ ಆ ಜಮೀನಿನಲ್ಲಿ ಹಿತಾಸಕ್ತಿ ಹೊಂದಿರುವವನಲ್ಲದ ಅಥವಾ ಭೂ ಹಿಡುವಳಿದಾರನ ಹಿತಾಸಕ್ತಿಯಲ್ಲಿ ಉತ್ತರಾಧಿಕಾರ ಹೊಂದಿಲ್ಲದ ಯಾರೇ ವ್ಯಕ್ತಿಯ ಮೇಲೆ ಅಥವಾ [1][ವಂತಿಗೆಯ][1] ಯಾವುದೇ ಕಂತಿಗೆ ಸಂಬಂಧಿಸಿದಂತೆ ನೋಟೀಸನ್ನು ಜಾರಿ ಮಾಡುವುದು ಅವಶ್ಯಕವಾಗಿರತಕ್ಕದ್ದಲ್ಲ ಎಂದು ಈ ಮೂಲಕ ಘೋಷಿಸಲಾಗಿದೆ.

1. 1966ರ ಅಧಿನಿಯಮ 13ರ ಮೂಲಕ 1.9.1960ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(3) xxx][1]

1. 1966ರ ಅಧಿನಿಯಮ 13ರ ಮೂಲಕ 1.9.1960ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

**6. ವಂತಿಗೆ ಸಂದಾಯದ ವಿಧಾನ.–** (1) ಯಾವುದೇ ಜಮೀನಿನ ಸಂಬಂಧವಾಗಿ ಯಾವುದೇ [1][ವಂತಿಗೆಯನ್ನು][1] ಸಂದಾಯ ಮಾಡಬೇಕಾಗಿರುವ ಭೂ ಹಿಡುವಳಿದಾರನು [1][ವಂತಿಗೆಯ][1] ಮೊತ್ತಕ್ಕೆ ಸಮನಾದ ಮೌಲ್ಯವಿರುವ ತನ್ನ ಜಮೀನಿನ ಒಂದು ಭಾಗವನ್ನು ಸರ್ಕಾರಕ್ಕೆ ಒಪ್ಪಿಸುವ ಮೂಲಕವಾಗಲಿ ಅಥವಾ ನಗದು ರೂಪದಲ್ಲಾಗಲಿ ಅಥವಾ ಭಾಗಶಃ ಜಮೀನನ್ನು ಅಧ್ಯರ್ಪಣ ಮಾಡುವ ಮೂಲಕವಾಗಲಿ ಮತ್ತು ಭಾಗಶಃ ನಗದನ್ನು ನೀಡುವ ಮೂಲಕವಾಗಲಿ ನಿಯಮಿಸಲಾದ ರೀತಿಯಲ್ಲಿ ಸಂದಾಯ ಮಾಡತಕ್ಕದ್ದು.

1. 1966ರ ಅಧಿನಿಯಮ 13ರ ಮೂಲಕ 1.9.1960ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(2) ಜಮೀನನ್ನು ಪೂರ್ಣವಾಗಿ ಅಥವಾ ಭಾಗಶಃ ಆಗಿ ಒಪ್ಪಿಸುವ ಮೂಲಕ [1][ವಂತಿಗೆಯ][1] ಸಂದಾಯ ಮಾಡುವುದನ್ನು ಭೂ ಹಿಡುವಳಿದಾರನು ಆಯ್ಕೆ ಮಾಡಿಕೊಂಡಲ್ಲಿ, ಹಾಗೆ ಒಪ್ಪಿಸುವಿಕೆಯು, ಈ ಕೆಳಕಂಡ ಷರತ್ತುಗಳಿಗೊಳಪಟ್ಟಿರತಕ್ಕದ್ದು,–

1. 1966ರ ಅಧಿನಿಯಮ 13ರ ಮೂಲಕ 1.9.1960ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಎ) [1][ವಂತಿಗೆಯನ್ನು][1] ಸಂದಾಯ ಮಾಡುವ ಉದ್ದೇಶಕ್ಕಾಗಿ, ಒಪ್ಪಿಸಬೇಕೆಂದು ಇರುವ ಜಮೀನಿನ ಮೌಲ್ಯವನ್ನು ನಿಯಮಿಸಬಹುದಾದಂಥ ರೀತಿಯಲ್ಲಿ [2][ಜಿಲ್ಲಾಧಿಕಾರಿಯು][2] ನಿರ್ಧರಿಸತಕ್ಕದ್ದು;

1. 1966ರ ಅಧಿನಿಯಮ 13ರ ಮೂಲಕ 1.9.1960ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
2. 1961ರ ಅಧಿನಿಯಮ 23ರ ಮೂಲಕ 16.11.1961ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಬಿ) ಜಮೀನಿನ ಮಾಲೀಕನು, ಆ ಜಮೀನು ಎಲ್ಲ ಋಣಭಾರಗಳಿಂದ ಮುಕ್ತವಾಗಿದೆ ಎಂದು [1][ಜಿಲ್ಲಾಧಿಕಾರಿಗೆ][1] ಮನದಟ್ಟಾಗುವಂತೆ ರುಜುವಾತುಪಡಿಸತಕ್ಕದ್ದು. [1][ಜಿಲ್ಲಾಧಿಕಾರಿಯು][1], ಉದ್ದೇಶಿತ ಅಧ್ಯರ್ಪಣವನ್ನು ಅಧಿಸೂಚಿಸತಕ್ಕದ್ದು ಮತ್ತು ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಸಮಯದ ಒಳಗೆ ಆಕ್ಷೇಪಣೆಗಳನ್ನು ಆಹ್ವಾನಿಸತಕ್ಕದ್ದು; ಯಾವುದೇ ಆಕ್ಷೇಪಣೆಯನ್ನು ಸ್ವೀಕರಿಸಿದ [1][ಜಿಲ್ಲಾಧಿಕಾರಿಗೆ][1] ಆ ಜಮೀನು ಋಣಭಾರದಿಂದ ಮುಕ್ತವಾಗಿಲ್ಲವೆಂದು ಮನದಟ್ಟಾದರೆ, ಅವನು ಅಧ್ಯರ್ಪಣೆಯ ಸ್ವೀಕಾರವನ್ನು ತಿರಸ್ಕರಿಸತಕ್ಕದ್ದು ಮತ್ತು ವಂತಿಗೆಯನ್ನು ನಗದು ರೂಪದಲ್ಲಿ ವಸೂಲಿ ಮಾಡತಕ್ಕದ್ದು; ಯಾವುದೇ ಆಕ್ಷೇಪಣೆಯನ್ನು ಸ್ವೀಕರಿಸದಿದ್ದರೆ ಮತ್ತು [1][ಜಿಲ್ಲಾಧಿಕಾರಿಗೆ][1] ಆ ಜಮೀನು ಋಣಭಾರಗಳಿಂದ ಮುಕ್ತವಾಗಿದೆ ಎಂದು ಮನದಟ್ಟಾದರೆ, ಅವರು, ಒಪ್ಪಿಸುವಿಕೆಯನ್ನು ಲಿಖಿತ ಆದೇಶದ ಮೂಲಕ ಅಂಗೀಕರಿಸತಕ್ಕದ್ದು. ಮತ್ತು ಹಾಗೆ ಅಂಗೀಕರಿಸಿದ ತರುವಾಯ ಜಮೀನು ಎಲ್ಲ ಋಣಭಾರಗಳಿಂದ ಮುಕ್ತವಾಗಿ ಸರ್ಕಾರದಲ್ಲಿ ನಿಹಿತವಾಗತಕ್ಕದ್ದು ಮತ್ತು ಸರ್ಕಾರವು ತನಗೆ ಸೂಕ್ತವೆನಿಸಬಹುದಾದಂಥ ರೀತಿಯಲ್ಲಿ ಅದನ್ನು ವಿಲೆ ಮಾಡಬಹುದು:

1. 1961ರ ಅಧಿನಿಯಮ 23ರ ಮೂಲಕ 16.11.1961ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, [1][ಜಿಲ್ಲಾಧಿಕಾರಿಯು][1] ಜಮೀನಿನ ಸ್ಥಳವು ಪ್ರವೇಶಕ್ಕೆ ಸುಲಭ ಸಾಧ್ಯವಿಲ್ಲವೆಂಬ ಅಥವಾ ಅನುಕೂಲಕರವಾಗಿಲ್ಲ ಎಂಬ ಅಥವಾ ನಿಯಮಿಸಬಹುದಾದಂಥ ಇತರ ಕಾರಣಗಳ ಮೇಲೆ ಅಧ್ಯರ್ಪಣವನ್ನು ಅಂಗೀಕರಿಸಲು ತಿರಸ್ಕರಿಸಬಹುದು.

1. 1961ರ ಅಧಿನಿಯಮ 23ರ ಮೂಲಕ 16.11.1961ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(3) ಸರ್ಕಾರವು, ಯಾವುದೇ ಕಾಮಗಾರಿಯ ಅಥವಾ ಪ್ರಕರಣಗಳ ವರ್ಗದ ಸಂಬಂಧದಲ್ಲಿ, [1][ವಂತಿಗೆಯನ್ನು][1] ನಗದು ರೂಪದಲ್ಲಿ ಮಾತ್ರವೇ ಸಂದಾಯ ಮಾಡತಕ್ಕದ್ದೆಂದು ಮತ್ತು ಜಮೀನನ್ನು ಅಧ್ಯರ್ಪಣ ಮಾಡುವ ಮೂಲಕ ಅಲ್ಲವೆಂದು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ದೇಶಿಸಬಹುದು.

(4) [1][ವಂತಿಗೆಯನ್ನು][1] ನಗದು ರೂಪದಲ್ಲಿ ಸಂದಾಯ ಮಾಡಬೇಕಾಗಿರುವಲ್ಲಿ, ಅದನ್ನು ಇಪ್ಪತ್ತು ವಾರ್ಷಿಕ ಕಂತುಗಳನ್ನು ಮೀರದಂತೆ ಮತ್ತು ನಿಯಮಿಸಬಹುದಾದಂಥ ಅವಧಿಯಲ್ಲಿ ಸಂದಾಯ ಮಾಡತಕ್ಕದ್ದು:

1. 1966ರ ಅಧಿನಿಯಮ 13ರ ಮೂಲಕ 1.9.1960ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಪರಂತು, ಮೊದಲ ಕಂತನ್ನು ಸಂದಾಯ ಮಾಡುವ ದಿನದಂದು ಅಥವಾ ಅದಕ್ಕೂ ಮೊದಲು ಅಥವಾ ಆ ದಿನಾಂಕದಿಂದ ಎರಡು ವರ್ಷಗಳ ಅವಧಿಯೊಳಗಿನ ಯಾವುದೇ ತದನಂತರದ ದಿನಾಂಕದಂದು, ಮಾಲೀಕನು ಪೂರ್ಣ [1][ವಂತಿಗೆಯನ್ನು][1] ಅಥವಾ ಸಂದರ್ಭಾನುಸಾರ, [1][ವಂತಿಗೆಯ][1] ಬಾಕಿ ಮೊಬಲಗನ್ನು ಸಂದಾಯ ಮಾಡಿದರೆ, ಅವನು [1][ವಂತಿಗೆ][1] ಅಥವಾ ಸಂದರ್ಭಾನುಸಾರ ಅಂಥ [1][ವಂತಿಗೆಯ][1] ಬಾಕಿ ಮೊಬಲಗಿನ ಶೇಕಡಾ 10 ರಷ್ಟು ರಿಯಾಯಿತಿಗೆ ಹಕ್ಕುಳ್ಳವನಾಗಿರತಕ್ಕದ್ದು:

1. 1966ರ ಅಧಿನಿಯಮ 13ರ ಮೂಲಕ 1.9.1960ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

ಮತ್ತೂ ಪರಂತು, [1][ವಂತಿಗೆಯ][1] ಮೊತ್ತವು ಬಾಕಿಯಾಗುತ್ತಾ ಹೋದರೆ, ಅಂಥ ಬಾಕಿ ಮೊತ್ತದ ಮೇಲೆ, ನಿಯಮಿಸಲಾದ ದರದ ಬಡ್ಡಿಯನ್ನು ಸಂದಾಯ ಮಾಡತಕ್ಕದ್ದು.

1. 1966ರ ಅಧಿನಿಯಮ 13ರ ಮೂಲಕ 1.9.1960ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**7. ವಂತಿಗೆಯನ್ನು ಭೂ ಕಂದಾಯದ ಬಾಕಿಯಂತೆ ವಸೂಲು ಮಾಡುವುದು.–** ಯಾವುದೇ ಜಮೀನಿನ ಸಂಬಂಧದಲ್ಲಿ ಈ ಅಧಿನಿಯಮದ ಅಡಿಯಲ್ಲಿ ಸಂದಾಯ ಮಾಡಬೇಕಾದ ವಂತಿಗೆಯನ್ನು, ಸದರಿ ಜಮೀನಿನ ಮೇಲಿನ ಕಂದಾಯ ತಗಾದೆಯ ಬಾಕಿ ಎಂದು ಪರಿಗಣಿಸತಕ್ಕದ್ದು ಮತ್ತು ಆ ಜಮೀನು, ಅದರ ಉತ್ಪನ್ನಗಳು ಮತ್ತು ಜಮೀನಿನ ಮೇಲೆ ಇರುವ ಕಟ್ಟಡವನ್ನು (ಭೂಮಾಲೀಕನ ಒಡೆತನ ಹೊಂದಿರುವ) ವಂತಿಗೆಯ ಭದ್ರತೆ ಎಂದು ಪರಿಗಣಿಸತಕ್ಕದ್ದು. ಯಾವುದೇ ವರ್ಷದಲ್ಲಿ ಸಂದಾಯ ಮಾಡಬೇಕಾದ ಯಾವುದೇ ವಂತಿಗೆಯ ಯಾವುದೇ ಕಂತನ್ನು ಸಂದಾಯ ಮಾಡಬೇಕಾದ ದಿನಾಂಕದಂದು ಸಂದಾಯ ಮಾಡದಿದ್ದರೆ, ಕಂತಿನ ಮೊತ್ತವನ್ನು ಭೂ ಕಂದಾಯದ ಬಾಕಿ ಎಂದು ಪರಿಗಣಿಸತಕ್ಕದ್ದು ಮತ್ತು ಜಾರಿಯಲ್ಲಿರುವ ಭೂ ಕಂದಾಯದ ವಸೂಲಿಯನ್ನು ವಿನಿಯಮಿಸುವ ಕಾನೂನಿನ ಉಪಬಂಧಗಳು, ಆ ಜಮೀನಿನ ಭೂ ಕಂದಾಯವನ್ನು ವಸೂಲಿ ಮಾಡುವುದಕ್ಕೆ ಅನ್ವಯವಾಗುವಂತೆಯೇ ಆ ಬಾಕಿಯ ಮತ್ತು ಆ ಬಾಕಿಯ ಮೇಲಣ ಬಡ್ಡಿಯ ವಸೂಲಿಗೂ ಅನ್ವಯವಾಗತಕ್ಕದ್ದು.

**8. ಜಮೀನಿನಲ್ಲಿ ಹಿತಾಸಕ್ತಿ ಹೊಂದಿದ ವ್ಯಕ್ತಿಯಿಂದ ವಂತಿಗೆಯ ಸಂದಾಯ.–** ಒಂದು ಜಮೀನಿನಲ್ಲಿ ಹಿತಾಸಕ್ತಿ ಹೊಂದಿರುವ ಅಂಥ ಜಮೀನಿನ ಆ ಯಾರೇ ವ್ಯಕ್ತಿಯು, ಭೂ ಹಿಡುವಳಿದಾರನಾಗಿರದಿದ್ದಾಗ್ಯೂ, ಅಂಥ ಜಮೀನಿನ ಹಿಡುವಳಿದಾರನು ಸಂದಾಯ ಮಾಡಬೇಕಾಗಿದ್ದ ವಂತಿಗೆಯನ್ನು ಸಂದಾಯ ಮಾಡಬಹುದು ಮತ್ತು ಭೂ ಹಿಡುವಳಿದಾರನು ವಂತಿಗೆಯನ್ನು ಸಂದಾಯ ಮಾಡಲು ಹೊಣೆಗಾರನಾಗಿರುವ ಆ ದಿನಾಂಕದಿಂದ ಎರಡು ವರ್ಷಗಳ ಅವಧಿಯೊಳಗೆ ಅಂಥ ವ್ಯಕ್ತಿಯು ಪೂರ್ತಿ ವಂತಿಗೆಯನ್ನು ಸಂದಾಯ ಮಾಡಿದರೆ ಅವನು ಶೇಕಡಾ ಹತ್ತರ ರಿಯಾಯಿತಿ ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು.

**9. ವಂತಿಗೆಗೆ ಸಂಬಂಧಿಸಿದ ಹಣ ತುಂಬಿಕೊಡುವ ಹಕ್ಕು.–** ಈ ಅಧಿನಿಯಮದ ಅಡಿಯಲ್ಲಿ ವಂತಿಗೆಯನ್ನು ಸಂದಾಯ ಮಾಡಲು ಹೊಣೆಗಾರನಾದ ಭೂ ಹಿಡುವಳಿದಾರನು (ದಕ್ಷಿಣ ಕನ್ನಡ ಜಿಲ್ಲೆಯ ಒಳವರ್ಗದಾರ, ಖಾಯಂ ಗೇಣಿದಾರ, ಖಾಯಂ ಬಾಡಿಗೆದಾರ ಅಥವಾ ಮೂಲ ಗೇಣಿದಾರನಲ್ಲದ) ಜಮೀನಿನ ಮಾಲೀಕನಾಗಿರದಿದ್ದಲ್ಲಿ ಅಥವಾ ಜಮೀನಿನ ಸಹ ಮಾಲೀಕನಾಗಿದ್ದಲ್ಲಿ, ಈ ಅಧಿನಿಯಮದಲ್ಲಿ ಏನೇ ಇದ್ದರೂ, ಮಾಲೀಕನಿಂದ ಹಣ ತುಂಬಿ ಕೊಡುವ ಅಥವಾ ಸಂದರ್ಭಾನುಸಾರ, ಸಹ ಮಾಲೀಕನಿಂದ ಪ್ರಮಾಣಾನುಸಾರ ಭಾಗದ ವಸೂಲಿ ಮಾಡುವ ಅವನ ಹಕ್ಕಿಗೆ ಬಾಧಕವಾಗುತ್ತದೆಂದು ಭಾವಿಸತಕ್ಕದ್ದಲ್ಲ.

**10. ನೀರು ದರ ವಿಧಿಸುವಿಕೆ.–**

(1) [1][(ಎ) xxx][1]

1. 1965ರ ಅಧಿನಿಯಮ 18 ರ ಮೂಲಕ 11.11.1965ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.

(ಬಿ) ಸರ್ಕಾರಕ್ಕೆ ಸೇರಿದ ಅಥವಾ ಸರ್ಕಾರದಿಂದ ಅಥವಾ ಸರ್ಕಾರದ ಪರವಾಗಿ ನಿರ್ಮಿಸಿದ ಯಾವುದೇ ಕಾಮಗಾರಿಯಿಂದ [1][ನೀರನ್ನು ಪೂರೈಸಿದಾಗಲೆಲ್ಲ ಅಥವಾ ಲಭ್ಯವಾಗುವಂತೆ ಮಾಡಿದಾಗಲೆಲ್ಲ ಅಥವಾ ನೀರಾವರಿ ಉದ್ದೇಶಕ್ಕಾಗಿ ಅಥವಾ ಇತರ ಯಾವುದೇ ಉದ್ದೇಶಕ್ಕಾಗಿ ಬಳಸಿದಾಗಲೆಲ್ಲ][1]; ಮತ್ತು

1. 1964ರಅಧಿನಿಯಮ 8ರ ಮೂಲಕ 27.02.1964ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) ಯಾವುದೇ ಕಾಮಗಾರಿಯಿಂದ ನೀರನ್ನು, ಪಕ್ಕದ ಜಮೀನಿನಿಂದ ಅಥವಾ ಅದರ ಮೂಲಕವಾಗಿ ನೇರವಾಗಿ ಹರಿಸುವ ಮೂಲಕ ಅಥವಾ ಬಸಿಯುವ ಮೂಲಕ ಅಥವಾ ನೇರವಾಗಿ ಹರಿಸದೆ ಅಥವಾ ಬಸಿಯದೆ ಅಥವಾ ಚರಂಡಿಯಿಂದ ಯಾವುದೇ ಸಾಗುವಳಿ ಜಮೀನನ್ನು ನೀರಾವರಿಗೊಳಪಡಿಸಿದಾಗ ಅಥವಾ ಜಲಾಶಯಕ್ಕೆ ಹರಿಸಿ, ಆ ತರುವಾಯ, ನೀರನ್ನು ನೆರೆಯ ಜಮೀನಿನಿಂದ ಅಥವಾ ಅದರ ಮೂಲಕ ನೇರವಾಗಿ ಹರಿಸುವ ಮೂಲಕ ಅಥವಾ ಬಸಿಯುವ ಮೂಲಕ ಅಥವಾ ನೇರವಾಗಿ ಹರಿಸದೆ ಅಥವಾ ಬಸಿಯದೆ ಅಥವಾ ಚರಂಡಿಯಿಂದ ಯಾವುದೇ ಸಾಗುವಳಿ ಜಮೀನನ್ನು ನೀರಾವರಿಗೊಳಪಡಿಸಿದಾಗ ಮತ್ತು ಅಂಥ ನೀರಾವರಿಯು, ಅಂಥ ಜಮೀನಿನ ಮೇಲೆ ನಿಂತಿರುವ ಬೆಳೆಗೆ ಪ್ರಯೋಜನಕಾರಿಯಾದುದೆಂದು ಮತ್ತು ಅದರ ಅಗತ್ಯತೆಗೆ ಸಾಕಷ್ಟೆಂದು [1][ಜಿಲ್ಲಾಧಿಕಾರಿಯು][1] ಅಭಿಪ್ರಾಯ ಪಟ್ಟಲ್ಲಿ;

1. 1961ರ ಅಧಿನಿಯಮ 23ರ ಮೂಲಕ 16.11.1961ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ಡಿ) ಆಂಧ್ರ ರಾಜ್ಯ ಅಧಿನಿಯಮ, 1953ರ 66ನೇಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಪ್ರಾಧಿಕಾರದಿಂದ ಸರ್ಕಾರಕ್ಕೆ ಪೂರೈಸಲಾದ ಅಥವಾ ಲಭ್ಯವಾಗುವಂತೆ ಮಾಡಲಾದ ನೀರನ್ನು ನೀರಾವರಿ ಉದ್ದೇಶಗಳಿಗಾಗಿ ಅಥವಾ ಇತರ ಯಾವುದೇ ಉದ್ದೇಶಕ್ಕಾಗಿ ಪೂರೈಸಿದಾಗ, ಲಭ್ಯವಾಗುವಂತೆ ಮಾಡಿದಾಗ ಅಥವಾ ಬಳಸಿದಾಗ][1]

1. 1964ರ ಅಧಿನಿಯಮ 8 ರ ಮೂಲಕ 27.2.1964ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

– ಸರ್ಕಾರವು ಅಂಥ ನೀರಿಗೆ ಸಂಬಂಧಿಸಿದಂತೆ, (ಇದರಲ್ಲಿ ಇನ್ನು ಮುಂದೆ ನೀರಿನ ದರ ಎಂದು ಉಲ್ಲೇಖಿಸಿರುವ) ಪ್ರತ್ಯೇಕ ಫೀಜನ್ನು ವಿಧಿಸಲು ಹಕ್ಕುಳ್ಳದ್ದಾಗಿರತಕ್ಕದ್ದು. ಮತ್ತು [1][ಸರ್ಕಾರವು ಅಂಥ ನೀರು ದರಗಳನ್ನು ಯಾವ ದರದಲ್ಲಿ ವಸೂಲು ಮಾಡತಕ್ಕದೆಂದು ನಿಯಮಿಸಬಹುದು, ಅವು,–

(i) ವಿವಿಧ ಉದ್ದೇಶಗಳಿಗಾಗಿ ಪೂರೈಸಿದ, ಲಭ್ಯವಾಗುವಂತೆ ಮಾಡಿದ ಅಥವಾ ಬಳಸಿದ ನೀರಿಗೆ ಬೇರೆ ಬೇರೆ ದರಗಳಾಗಿರಬಹುದು;][1]

1. 1964ರ ಅಧಿನಿಯಮ 8 ರ ಮೂಲಕ 27.2.1964ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][(ii) ವಿವಿಧ ನೀರಾವರಿ ಕಾಮಗಾರಿಗಳಿಂದ ಪೂರೈಸಿದ, ಲಭ್ಯವಾಗುವಂತೆ ಮಾಡಿದ ಅಥವಾ ಬಳಸಿದ ನೀರಿಗೆ ಬೇರೆ ಬೇರೆ ದರಗಳಾಗಿರಬಹುದು, ಮತ್ತು ಅಂಥ ಜಮೀನಿನ ಮೇಲೆ ಬೆಳೆದ ಬೆಳೆ ಅಥವಾ ಬೆಳೆಗಳ ಬಗ್ಗೆ ಅಥವಾ

**37. ಪ್ರದೇಶ ಅಥವಾ ಎಸ್ಟೇಟು ಅಥವಾ ಅದರ ಭಾಗವನ್ನು ಹಿಂತೆಗೆದುಕೊಳ್ಳುವುದು.–** ಯಾವುದೇ ಕೈಗಾರಿಕಾ ಪ್ರದೇಶ ಅಥವಾ ಅದರ ಯಾವುದೇ ಭಾಗದ ಸಂಬಂಧದಲ್ಲಿ, ಈ ಅಧಿನಿಯಮದ ಅಡಿಯಲ್ಲಿ ಯಾವ ಉದ್ದೇಶಕ್ಕಾಗಿ ಮಂಡಳಿಯನ್ನು ಸ್ಥಾಪಿಸಲಾಗಿತ್ತೋ ಆ ಉದ್ದೇಶವನ್ನು, ಅಂಥ ಪ್ರದೇಶವು ಅಥವಾ ಅದರ ಭಾಗವು ಮಂಡಳಿಯ ಅಡಿಯಲ್ಲಿ ಮುಂದುವರೆಯುತ್ತಾ ಇರುವುದು ಅನಗತ್ಯವೆನಿಸುವಷ್ಟರ ಮಟ್ಟಿಗೆ ಗಣನೀಯವಾಗಿ ಸಾಧಿಸಲಾಗಿದೆಯೆಂದು ರಾಜ್ಯ ಸರ್ಕಾರಕ್ಕೆ ಮನದಟ್ಟಾದರೆ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ, ಅಂಥ ಪ್ರದೇಶವನ್ನು ಅಥವಾ ಅದರ ಭಾಗವನ್ನು ಮಂಡಳಿಯ ಅಧಿಕಾರ ವ್ಯಾಪ್ತಿಯಿಂದ ತೆಗೆದುಹಾಕಲಾಗಿದೆಯೆಂದು ಘೋಷಿಸಬಹುದು. ರಾಜ್ಯ ಸರ್ಕಾರವು, ಅಂಥ ಪ್ರದೇಶದ ಅಥವಾ ಅದರ ಭಾಗದ ನಿರ್ವಹಣೆಗಾಗಿ ಸಂದರ್ಭಗಳು ಅಗತ್ಯಪಡಿಸುವಂಥ ಪ್ರಾಸಂಗಿಕವಾದ ಇತರ ಏರ್ಪಾಡುಗಳನ್ನು ಸಹ ಮಾಡಬಹುದು.

**38. ಅಭಿಯೋಜನೆಯ ಅಧಿಕಾರ.–** ಅನ್ಯಥಾ ವ್ಯಕ್ತವಾಗಿ ಉಪಬಂಧಿಸಿದ ಹೊರತು, ಯಾವುದೇ ನ್ಯಾಯಾಲಯವು ಈ ಅಧಿನಿಯಮದ ಮೂಲಕ ಅಥವಾ ಅಡಿಯಲ್ಲಿ, ಮಂಡಲಿಗೆ ಸೇರಿರುವ ಅಥವಾ ಅದರಲ್ಲಿ ನಿಹಿತವಾಗಿರುವ ಸ್ವತ್ತಿಗೆ ಸಂಬಂಧಿಸಿದಂತೆ ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧವನ್ನು, ಮಂಡಳಿಯು ಅಥವಾ ಇದರ ಪರವಾಗಿ ಸಾಮಾನ್ಯ ಅಥವಾ ವಿಶೇಷ ಅದೇಶದ ಮೂಲಕ ಮಂಡಳಿಯು ಅಧಿಕಾರ ನೀಡಿದ ಯಾರೇ ವ್ಯಕ್ತಿಯು ಕೊಟ್ಟ ದೂರಿನ ಮೇಲೆ ಹೊರತು ಅಥವಾ ಮಂಡಳಿಯಿಂದ ಅಥವಾ ಅವನಿಂದ ಸ್ವೀಕರಿಸಿದ ಮಾಹಿತಿಯ ಮೇಲೆ ಹೊರತು, ಸಂಜ್ಞಾನಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

**39. ಅಡ್ಡಿಯುಂಟು ಮಾಡಿದ್ದಕ್ಕಾಗಿ ದಂಡ.–** ಯಾವುದೇ ಭೂಮಿ ಅಥವಾ ಕಟ್ಟಡದೊಳಗೆ ಅಥವಾ ಅದನ್ನು ಪ್ರವೇಶಿಸಲು 35ನೇ ಪ್ರಕರಣದ ಅಡಿಯಲ್ಲಿ ಅಧಿಕೃತವಾದ ವ್ಯಕ್ತಿಯ ಪ್ರವೇಶಕ್ಕೆ ಅಡ್ಡಿಪಡಿಸುವ ಅಥವಾ ಅಂಥ ಪ್ರವೇಶದ ನಂತರ ಅಂಥ ವ್ಯಕ್ತಿಗೆ ಉಪದ್ರವ ನೀಡುವ ಅಥವಾ ಈ ಅಧಿನಿಯಮದ ಮೂಲಕ ಅಥವಾ ಅಡಿಯಲ್ಲಿ ಪ್ರದತ್ತವಾದ ಯಾವುದೇ ಅಧಿಕಾರವನ್ನು ಅವನು ಕಾನೂನುಬದ್ಧವಾಗಿ ಚಲಾಯಿಸುವುದಕ್ಕೆ ಅಡ್ಡಿಯುಂಟು ಮಾಡುವ ಯಾರೇ ವ್ಯಕ್ತಿಯನ್ನು ಆರು ತಿಂಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಒಂದು ಸಾವಿರ ರೂಪಾಯಿಗಳವರೆಗಿನ ಜುಲ್ಮಾನೆಯಿಂದ ಅಥವಾ ಅವರೆಡರಿಂದಲೂ ದಂಡಿಸತಕ್ಕದ್ದು.

**40. ನಿಯಮ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಪೂರ್ವ ಪ್ರಕಟಣೆಯ ತರುವಾಯ, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಮೇಲೆ ಹೇಳಿದ ಅಧಿಕಾರಗಳ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ಅಂಥ ನಿಯಮಗಳು ಈ ಮುಂದಿನ ಎಲ್ಲ ಅಥವಾ ಯಾವುವೇ ವಿಷಯಗಳಿಗಾಗಿ ಉಪಬಂಧಿಸಬಹುದು, ಎಂದರೆ:–

(ಎ) 7ನೇ ಪ್ರಕರಣದ ಅಡಿಯಲ್ಲಿ ಮಂಡಳಿಯ ಸದಸ್ಯರ ಪ್ರತಿಫಲ ಭತ್ಯೆ;

(ಬಿ) 20ನೇ ಪ್ರಕರಣದ ಅಡಿಯಲ್ಲಿ ಮಂಡಳಿಯು ಯಾವ ಷರತ್ತುಗಳಿಗೊಳಪಟ್ಟು ಸಾಲ ಪಡೆಯಬಹುದೋ ಆ ಷರತ್ತುಗಳು;

(ಸಿ) 22ನೇ ಪ್ರಕರಣದ ಅಡಿಯಲ್ಲಿ ವಾರ್ಷಿಕ ಹಣಕಾಸು ವಿವರಪತ್ರ ಮತ್ತು ವಾರ್ಷಿಕ ಕಾರ್ಯಕ್ರಮಗಳನ್ನು ಸಿದ್ಧಪಡಿಸುವ ನಮೂನೆ ಮತ್ತು ರೀತಿ;

(ಡಿ) 24ನೇ ಪ್ರಕರಣದ ಅಡಿಯಲ್ಲಿ ಲೆಕ್ಕಪತ್ರಗಳನ್ನು ನಿರ್ವಹಿಸುವ ರೀತಿ ಮತ್ತು ನಮೂನೆ ಹಾಗೂ ವಾರ್ಷಿಕ ವರದಿಯ ನಮೂನೆ ಮತ್ತು ರೀತಿ;

(ಇ) 31ನೇ ಪ್ರಕರಣದ ಮೇರೆಗೆ ಸರ್ಕಾರದ ಅಧಿಕಾರಗಳ ಪ್ರತ್ಯಾಯೋಜನೆ;

(ಎಫ್) ಮಂಡಳಿಯು ವಿಧಿಸಬಹುದಾದಂಥ ಫೀಜುಗಳು;

(ಜಿ) ನಿಯಮಗಳ ಮೂಲಕ ನಿಯಮಿಸಬೇಕಾದ ಅಥವಾ ನಿಯಮಿಸಬಹುದಾದ ಯಾವುದೇ ಇತರ ವಿಷಯ.

**41. ವಿನಿಯಮಗಳ ರಚನಾಧಿಕಾರ.–** (1) ಮಂಡಳಿಯು, ರಾಜ್ಯ ಸರ್ಕಾರದ ಪೂರ್ವಾನುಮೋದನೆ ಪಡೆದು, ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವ ಸಲುವಾಗಿ, ಈ ಅಧಿನಿಯಮ ಮತ್ತು ಅದರ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳಿಗೆ ಸುಸಂಗತವಾಗಿರುವ ವಿನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಮೇಲೆ ಹೇಳಿದ ಅಧಿಕಾರದ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ, ಅಂಥ ವಿನಿಯಮಗಳನ್ನು ಈ ಮುಂದಿನವುಗಳಿಗಾಗಿ ಉಪಬಂಧಿಸಬಹುದು,–

(ಎ) 8ನೇ ಪ್ರಕರಣದ ಅಡಿಯಲ್ಲಿ ಮಂಡಳಿ ಸಭೆಯ ಕಾಲ ಮತ್ತು ಸ್ಥಳ ಮತ್ತು ಅಂಥ ಸಭೆಯಲ್ಲಿ ವ್ಯವಹಾರ ನಿರ್ವಹಣೆಯ ಸಂಬಂಧದಲ್ಲಿ ಅನುಸರಿಸಬೇಕಾದ ಕಾರ್ಯವಿಧಾನ;

(ಬಿ) ಯಾವ ನಿಬಂಧನೆಗಳು ಮತ್ತು ಷರತ್ತುಗಳ ಅಡಿಯಲ್ಲಿ ಮಂಡಳಿಯು ಭೂಮಿಯನ್ನು ವಿಲೆ ಮಾಡಬಹುದೋ ಆ ನಿಬಂಧನೆಗಳು ಮತ್ತು ಷರತ್ತುಗಳು;

(ಸಿ) ವಿನಿಯಮಗಳ ಮೂಲಕ ಉಪಬಂಧಿಸಬೇಕಾದ, ಅಥವಾ ಉಪಬಂಧಿಸಬಹುದಾದ ಯಾವುವೇ ಇತರ ವಿಷಯಗಳು.

**42. ನಿಯಮಗಳು ಮತ್ತು ವಿನಿಯಮಗಳನ್ನು ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸುವುದು.–** ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು ಮತ್ತು ಪ್ರತಿಯೊಂದು ವಿನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಅದು

ಅಧಿವೇಶನದಲ್ಲಿರುವಾಗ, ಒಂದು ಅಧಿವೇಶನದಲ್ಲಿ ಅಥವಾ ಒಂದಾದ ಮೇಲೊಂದರಂತೆ ಬರುವ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಇಡತಕ್ಕದ್ದು ಮತ್ತು ಅದನ್ನು ಹಾಗೆ ಇಡಲಾದ ಅಧಿವೇಶನದ ಅಥವಾ ನಿಕಟೋತ್ತರದ ಅಧಿವೇಶನಗಳ ಮುಕ್ತಾಯಕ್ಕೆ ಮುಂಚೆ, ಆ ನಿಯಮದಲ್ಲಿ ಅಥವಾ ವಿನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮ ಅಥವಾ ವಿನಿಯಮವನ್ನು ಮಾರ್ಪಾಟು ಮಾಡಬಾರದೆಂದು ಎರಡೂ ಸದನಗಳು ಒಪ್ಪಿದರೆ, ಆ ನಿಯಮ ಅಥವಾ ವಿನಿಯಮವು ಸಂದರ್ಭಾನುಸಾರ, ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು, ಆ ನಿಯಮದ ಅಥವಾ ವಿನಿಯಮದ ಮೇರೆಗೆ ಹಿಂದೆ ಮಾಡಲಾದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

**43. ಸ್ಟಾಂಪು ಸುಂಕ ಮತ್ತು ಫೀಜುಗಳ ವಿನಾಯಿತಿ.–** ಈ ಅಧಿನಿಯಮ ಅಥವಾ ಅದರ ಅಡಿಯಲ್ಲಿ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಅಡಿಯಲ್ಲಿ ನೀಡಲಾದ ಯಾವುದೇ ಐತೀರ್ಪು ಅಥವಾ ಮಾಡಿಕೊಳ್ಳಲಾದ ಯಾವುದೇ ಒಪ್ಪಂದ ಅಥವಾ ಬರೆದುಕೊಡಲಾದ ಯಾವುದೇ ಕರಾರು ಇವುಗಳಿಗೆ, [1][ಕರ್ನಾಟಕ][1] ಸ್ಟಾಂಪು ಅಧಿನಿಯಮ, 1957ರ ಅಡಿಯಲ್ಲಿನ ಸುಂಕವನ್ನು ಅಥವಾ ಭಾರತ ನೋಂದಣಿ ಅಧಿನಿಯಮ, 1908ರ ಅಡಿಯಲ್ಲಿನ ಫೀಜುಗಳನ್ನು ವಿಧಿಸತಕ್ಕದ್ದಲ್ಲ.

1. 1973ರ ಕರ್ನಾಟಕ ಕಾನೂನು ಅಳವಡಿಕೆಗಳ ಆದೇಶದ ಮೂಲಕ ದಿನಾಂಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**44. ಕಂಪನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ ಅಡಿಯಲ್ಲಿನ ಅಪರಾಧವನ್ನು ಒಂದು ಕಂಪನಿಯು ಮಾಡಿರುವಲ್ಲಿ, ಆ ಕಂಪನಿಯನ್ನು ಮತ್ತು ಅಪರಾಧವು ನಡೆದ ಕಾಲದಲ್ಲಿ ಆ ಕಂಪನಿಯ ಪ್ರಭಾರದಲ್ಲಿದ್ದ ಮತ್ತು ಅದರ ವ್ಯವಹಾರಗಳನ್ನು ನಡೆಸುವಲ್ಲಿ ಕಂಪನಿಗೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಮತ್ತು ಆ ಕಂಪನಿಯನ್ನು ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ತನ್ನ ವಿರುದ್ಧ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತನಾಗತಕ್ಕದ್ದು:

ಪರಂತು, ಅಂಥ ಅಪರಾಧವು ತನ್ನ ಅರಿವಿಗೆ ಬಾರದೆ ನಡೆಯಿತೆಂದು ಅಥವಾ ಅಂಥ ಅಪರಾಧ ನಡೆಯುವುದನ್ನು ತಡೆಗಟ್ಟಲು ತಾನು ಎಲ್ಲ ಯಥೋಚಿತ ಜಾಗರೂಕತೆಯನ್ನು ವಹಿಸಿದ್ದೆನೆಂದು ಅಂಥ ಯಾರೇ ವ್ಯಕ್ತಿಯು ರುಜುವಾತು ಪಡಿಸಿದರೆ, ಈ ಉಪ ಪ್ರಕರಣದಲ್ಲಿ ಅಡಕವಾಗಿರುವ ಯಾವುದೂ ಅವನನ್ನು ಯಾವುದೇ ದಂಡನೆಗೆ ಗುರಿಪಡಿಸತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದಲ್ಲಿ ಏನೇ ಇದ್ದಾಗ್ಯೂ, ಈ ಅಧಿನಿಯಮದ ಅಡಿಯಲ್ಲಿನ ಅಪರಾಧವನ್ನು ಒಂದು ಕಂಪನಿಯು ಮಾಡಿರುವಲ್ಲಿ ಮತ್ತು ಅಂಥ ಅಪರಾಧವು ಕಂಪನಿಯ ಯಾರೇ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ರುಜುವಾತಾದಲ್ಲಿ ಅಥವಾ ಅವರ ಯಾವುದೇ ನಿರ್ಲಕ್ಷತೆಯಿಂದಾಗಿ ನಡೆಯಿತೆಂದು ಆರೋಪಿಸಬಹುದಾದಲ್ಲಿ, ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನು ಸಹ ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ಅವನು ತನ್ನ ವಿರುದ್ಧ ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ತದನುಸಾರವಾಗಿ ದಂಡಿತನಾಗತಕ್ಕದ್ದು.

**ವಿವರಣೆ:–** ಈ ಪ್ರಕರಣದ ಉದ್ದೇಶಗಳಿಗಾಗಿ,–

(ಎ) "ಕಂಪನಿ" ಎಂದರೆ ಒಂದು ನಿಗಮಿತ ನಿಕಾಯ ಮತ್ತು ಅದು ಫರ್ಮನ್ನು ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ; ಮತ್ತು

(ಬಿ) ಒಂದು ಫರ್ಮಿನ ಸಂಬಂಧದಲ್ಲಿ "ನಿರ್ದೇಶಕ" ಎಂದರೆ ಫರ್ಮಿನ ಒಬ್ಬ ಪಾಲುಗಾರ.

**45. ಸದ್ಭಾವನೆಯಿಂದ ಕೈಗೊಂಡ ಕ್ರಮಕ್ಕೆ ರಕ್ಷಣೆ.–** ಈ ಅಧಿನಿಯಮದ ಅಥವಾ ಅದರ ಮೇರೆಗೆ ರಚಿತವಾದ ಯಾವುದೇ ನಿಯಮದ ಅಥವಾ ವಿನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ರಾಜ್ಯ ಸರ್ಕಾರದ ಅಥವಾ ಮಂಡಳಿಯ ಯಾರೇ ಅಧಿಕಾರಿಯ ವಿರುದ್ಧ, ಯಾವುದೇ ದಾವೆ, ಅಭಿಯೋಜನೆ ಅಥವಾ ಇತರ ಕಾನೂನು ವ್ಯವಹರಣೆ ಹೂಡಲು ಅವಕಾಶವಿರತಕ್ಕದ್ದಲ್ಲ.

**46. ಮಂಡಳಿಯ ನೌಕರರು ಲೋಕ ನೌಕರರಾಗಿರುವುದು.–** ಮಂಡಳಿಯ ಎಲ್ಲ ಸದಸ್ಯರು ಮತ್ತು ನೌಕರರು, ಈ ಅಧಿನಿಯಮದ ಯಾವುವೇ ಉಪಬಂಧಗಳನ್ನು ಅನುಸರಿಸಿ ಕಾರ್ಯ ನಿರ್ವಹಿಸುವಾಗ ಅಥವಾ ಕಾರ್ಯ ನಿರ್ವಹಿಸುತ್ತಿರುವರೆಂದು ತಾತ್ಪರ್ಯವಾಗುವಾಗ ಅವರನ್ನು ಭಾರತ ದಂಡ ಸಂಹಿತೆಯ 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಲೋಕ ನೌಕರರೆಂದು ಭಾವಿಸತಕ್ಕದ್ದು.

**47. ಇತರ ಕಾನೂನುಗಳಿಗೆ ಅಸಂಗತವಾಗಿರುವ ಉಪಬಂಧಗಳ ಪರಿಣಾಮ.–** ಈ ಅಧಿನಿಯಮದ ಉಪಬಂಧಗಳು ಯಾವುದೇ ಇತರ ಕಾನೂನಿನಲ್ಲಿ ಇದಕ್ಕೆ ಅಸಂಗತವಾದುದು ಏನೇ ಇದ್ದಾಗ್ಯೂ ಪರಿಣಾಮಕಾರಿಯಾಗತಕ್ಕದ್ದು.

**48. ಸಂದೇಹಗಳು ಮತ್ತು ತೊಂದರೆಗಳನ್ನು ನಿವಾರಿಸುವ ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ಸಂದೇಹ ಅಥವಾ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಅಧಿಸೂಚನೆ ಹೊರಡಿಸಿ, ಆ ಸಂದೇಹ ಅಥವಾ ತೊಂದರೆಯ ನಿವಾರಣೆಗಾಗಿ ತನಗೆ ಅವಶ್ಯ ಅಥವಾ ವಿಹಿತವೆಂದು ಕಂಡು ಬರಬಹುದಾದಂಥ

ಉಪಬಂಧಗಳನ್ನು ರಚಿಸಬಹುದು ಅಥವಾ ಈ ಅಧಿನಿಯಮದ ವ್ಯಕ್ತ ಉಪಬಂಧಗಳಿಗೆ ಅಸಂಗತವಾಗಿಲ್ಲದ ನಿರ್ದೇಶನವನ್ನು ನೀಡಬಹುದು ಮತ್ತು ಅಂಥ ಪ್ರತಿಯೊಂದು ಅಧಿಸೂಚನೆಯು, ಈ ಅಧಿನಿಯಮದಲ್ಲಿ ಅಧಿನಿಯಮಿತಗೊಳಿಸಿದ್ದರೆ ಹೇಗೋ ಹಾಗೆ ಪರಿಣಾಮ ಹೊಂದಿರತಕ್ಕದ್ದು.

**ಅಧಿಸೂಚನೆ**

**ಟಿಪ್ಪಣಿ:** ಒಂದು ಕೈಗಾರಿಕಾ ಪ್ರದೇಶವನ್ನು ಸ್ಥಾಪಿಸಲು ನಿರ್ಧಾರವನ್ನು ಕೈಗೊಂಡು ಮತ್ತು ಆ ಉದ್ದೇಶಕ್ಕಾಗಿ ಆ ಪ್ರದೇಶದಲ್ಲಿ ಭೂಮಿಯನ್ನು ಸ್ವಾಧೀನಪಡಿಸಿಕೊಂಡಾಗಲೆಲ್ಲ ಆ ಪ್ರದೇಶದಲ್ಲಿ VIIನೇ ಅಧ್ಯಾಯವನ್ನು ಜಾರಿಗೆ ತರಲಾಗಿದೆ. ಆ ಪ್ರದೇಶಗಳ ಸರ್ವೆ ಸಂಖ್ಯೆಗಳನ್ನು ನಿರ್ದಿಷ್ಟಪಡಿಸಿ ಅಂಥ ಅನೇಕ ಅಧಿಸೂಚನೆಗಳನ್ನು ಅಪಾರ ಸಂಖ್ಯೆಯಲ್ಲಿ ಹೊರಡಿಸಲಾಗಿದೆ. ಆ ಅಧಿಸೂಚನೆಗಳ ಅಧಿಕ ಪ್ರಮಾಣವನ್ನು ಗಮನದಲ್ಲಿಟ್ಟುಕೊಂಡು ಅವುಗಳನ್ನು ಇಲ್ಲಿ ಪ್ರಕಟಿಸಿಲ್ಲ.

**ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ನಿಯಮಗಳು, 1966**

**ನಿಯಮಗಳ ಅನುಕ್ರಮಣಿಕೆ**

ನಿಯಮಗಳು



**ಅಧಿಸೂಚನೆ**

**ಬೆಂಗಳೂರು, ದಿನಾಂಕ 4ನೇ ಅಕ್ಟೋಬರ್ 1966**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ ಸಂಖ್ಯೆ 18) 40 ನೇ ಪ್ರಕರಣದ (1) ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸಿ, ಅದರ ಕರಡನ್ನು ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 5 ನೇ ಜುಲೈ 1966ರ ಅಧಿಸೂಚನೆ ಸಂಖ್ಯೆ ಸಿಐ 71 ಜಿಎಂಐ 66 ರಲ್ಲಿ, ಜಿಎಸ್ ಆರ್ 1017 ಎಂಬುದಾಗಿ ದಿನಾಂಕ 7ನೇ ಜುಲೈ 1966 ಕರ್ನಾಟಕ ರಾಜ್ಯಪತ್ರದ ಭಾಗ–IV ಪ್ರಕರಣ 2–ಸಿ(i) ರಲ್ಲಿ ಪ್ರಕಟಿಸಿರುತ್ತದೆ, ಎಂದರೆ:–

# ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ನಿಯಮಗಳು, 1966

## ಅಧ್ಯಾಯ – I

## ಪ್ರಾರಂಭಿಕ

1. **ಶೀರ್ಷಿಕೆ.–** (1) ಈ ನಿಯಮಗಳನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ನಿಯಮಗಳು, 1966 ಎಂದು ಕರೆಯತಕ್ಕದ್ದು.

2. **ಪರಿಭಾಷೆಗಳು.–** ಈ ನಿಯಮಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಅಧಿನಿಯಮ" ಎಂದರೆ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿನಿಯಮ, 1965;

(ಬಿ) "ನಮೂನೆ" ಎಂದರೆ, ಈ ನಿಯಮಗಳಿಗೆ ಅನುಬಂಧಿಸಲಾಗಿರುವ ನಮೂನೆಗಳು;

(ಸಿ) "ನಾಮನಿರ್ದೇಶಿತ ಸದಸ್ಯ" ಎಂದರೆ, 6ನೇ ಪ್ರಕರಣದ (ಇ) ಖಂಡದ ಅಡಿಯಲ್ಲಿ ನಾಮ ನಿರ್ದೇಶಿತನಾದ ಮಂಡಳಿಯ ಸದಸ್ಯ;

(ಡಿ) "ವಿನಿಯಮಗಳು" ಎಂದರೆ, 41ನೇ ಪ್ರಕರಣದ ಅಡಿಯಲ್ಲಿ ಮಂಡಳಿಯು ರಚಿಸಿದ ವಿನಿಯಮಗಳು;

(ಇ) "ಪ್ರಕರಣ" ಎಂದರೆ, ಈ ಅಧಿನಿಯಮದ ಒಂದು ಪ್ರಕರಣ.

## ಅಧ್ಯಾಯ – II

## ಮಂಡಳಿಯ ಸದಸ್ಯರ ಪರಿಶ್ರಮ ಧನ

3. **ಸದಸ್ಯರ ಭತ್ಯೆ ಮತ್ತು ಗೌರವಧನ.–** (1) ಒಬ್ಬ ಸದಸ್ಯನು ಈ ಮುಂದಿನ ಪ್ರತಿಫಲ ಭತ್ಯೆಯನ್ನು ಪಡೆಯಲು ಹಕ್ಕು ಹೊಂದಿರತಕ್ಕದ್ದು, ಎಂದರೆ:–

(i) [1][ಮಂಡಳಿಯ ಅಥವಾ ಅದರ ಯಾವುದೇ ಸಮಿತಿಯ ಸಭೆಗೆ ಹಾಜರಾಗುವ ಸದಸ್ಯನಿಗೆ ಅಂಥ ದಿನವೊಂದಕ್ಕೆ ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅನುಮೋದಿಸಬಹುದಾದಷ್ಟು ದಿನಭತ್ಯೆಗೆ ಸಮವಾದ ಮೊತ್ತದ ಒಂದು ಉಪವೇಶನ ಶುಲ್ಕ][1].

1. ಅಧಿಸೂಚನೆ ಸಂಖ್ಯೆ ಸಿಐ 67 ಎಸ್‌ಪಿಕ್ಯೂ 87, ದಿನಾಂಕ 29ನೇ ಅಕ್ಟೋಬರ್/7.11.87(24.12.87) ರ ಮೂಲಕ ಪ್ರತಿಯೋಜಿಸಲಾಗಿದೆ

(ii) (ಎ) ಸರ್ಕಾರಿ ನೌಕರನಾಗಿರದ ಒಬ್ಬ ನಾಮ ನಿರ್ದೇಶಿತ ಸದಸ್ಯನು ಈ ಮುಂದಿನಂತೆ ಪ್ರಯಾಣ ಭತ್ಯೆಯನ್ನು ಪಡೆಯಬಹುದು, ಎಂದರೆ:–

| | | |
|---|---|---|
| I. ರೈಲು ಪ್ರಯಾಣ | ....... | Iನೇ ದರ್ಜೆ |
| II. ರೈಲು ಪ್ರಯಾಣಕ್ಕಾಗಿ ಪ್ರಾಸಂಗಿಕ ವೆಚ್ಚಗಳು | ...... | ಮೈಲು ಒಂದಕ್ಕೆ ಆರು ಪೈಸೆ |
| III. ರಸ್ತೆ ಮೈಲು ಭತ್ಯೆ | ...... | ಮೈಲು ಒಂದಕ್ಕೆ 50 ಪೈಸೆ |
| IV. ದಿನಭತ್ಯೆ | ...... | ದಿನವೊಂದಕ್ಕೆ 15 ರೂಪಾಯಿ |

(ಬಿ) ಸರ್ಕಾರಿ ನೌಕರರಾಗಿದ್ದು, ನಾಮನಿರ್ದೇಶಿತನಾಗಿರುವ ಸದಸ್ಯರೂ ಸೇರಿದಂತೆ, ಸದಸ್ಯರು ಎಲ್ಲ ಸರ್ಕಾರಿ ನೌಕರರಿಗೆ ಅನ್ವಯವಾಗುವಂಥ, ತತ್ಕಾಲದಲ್ಲಿ ಜಾರಿಯಲ್ಲಿರುವ ನಿಯಮಗಳ ಮೇರೆಗೆ ಅವರಿಗೆ ಅನುಮತಿಸಬಹುದಾದಂಥ ದರಗಳಲ್ಲಿ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರತಕ್ಕದ್ದು.

## ಅಧ್ಯಾಯ – III

## ಮಂಡಳಿಯು ಸಾಲ ಪಡೆಯುವುದಕ್ಕಾಗಿ ಷರತ್ತು

4. **ಸರ್ಕಾರದ ಪೂರ್ವ ಸಮ್ಮತಿಯಿಲ್ಲದೆ ಸಾಲ ಪಡೆಯುವುದರ ಮೇಲೆ ಪರಿಮಿತಿ.–** ಮಂಡಳಿಯ ಅಥವಾ ಯಾರೇ ಮೂರನೇ ಪಕ್ಷಕಾರನ ಯಾವುದೇ ಋಣ, ಹೊಣೆ ಅಥವಾ ಬಾಧ್ಯತೆಗಾಗಿ ಮಂಡಳಿಯು ಹಣವನ್ನು ಸಾಲ ಪಡೆಯಬಹುದು ಮತ್ತು ತನ್ನ ಉದ್ಯಮವನ್ನು ಮತ್ತು ಸ್ವತ್ತನ್ನು (ಅದರ ರಾಜಸ್ವಗಳೂ ಸೇರಿ) ಅಥವಾ ಅದರ ಯಾವುದೇ ಭಾಗವನ್ನು ಅಡಮಾನ ಮಾಡಬಹುದು ಅಥವಾ ಅದರ ಮೇಲೆ ಋಣಭಾರ ಹೊರಿಸಬಹುದು ಮತ್ತು ಮೇಲೆ ಹೇಳಿದ ಋಣ, ಹೊಣೆ ಅಥವಾ ಬಾಧ್ಯತೆಯ ಸಂಬಂಧದಲ್ಲಿ ಒಟ್ಟಾರೆಯಾಗಿ ಅಥವಾ ಭದ್ರತೆಯಾಗಿ ಡಿಬೆಂಚರು, ಡಿಬೆಂಚರು ಸ್ಟಾಕು, ನೋಟುಗಳು ಮತ್ತು ಇತರ ಭದ್ರತಾಪತ್ರಗಳನ್ನು ಒದಗಿಸಬಹುದು. ಆದರೆ, ಮೇಲೆ ಹೇಳಲಾದಂತೆ ತಾತ್ಕಾಲಿಕ ಸಾಲಗಳನ್ನು ಹೊರತುಪಡಿಸಿ ತತ್ಕಾಲದಲ್ಲಿ ಉಳಿದಿರುವ ಮತ್ತು ಮಂಡಳಿಯು ಮೇಲೆ ಹೇಳಿದಂತೆ ಸಾಲ ಪಡೆದಿರುವ ಅಥವಾ ಭದ್ರತೆಯೊದಗಿಸಿರುವ ಹಣದ ಋಣಭಾರದ ಒಟ್ಟು ಮೊಬಲಗು ಯಾವುದೇ ಸಮಯದಲ್ಲಿ ರಾಜ್ಯ ಸರ್ಕಾರದ ಪೂರ್ವಸಮ್ಮತಿ ಪಡೆಯದೆ 50,00,000 ರೂಪಾಯಿಗಳನ್ನು (ಐವತ್ತು ಲಕ್ಷ ರೂಪಾಯಿಗಳನ್ನು) ಮೀರತಕ್ಕದ್ದಲ್ಲ.

5. **ಭದ್ರತೆಗಳನ್ನು ಒದಗಿಸುವ ರೀತಿ.–** ಮಂಡಳಿಯು ಹಣವನ್ನು ಸಂಗ್ರಹಿಸುವುದಕ್ಕಾಗಿ ಅಥವಾ ಅದು ಎರವಲು ಪಡೆದ ಅಥವಾ ಅದರಿಂದ ಬಾಕಿಯಿರುವ ಹಣಕ್ಕೆ ಭದ್ರತೆ ಒದಗಿಸುವುದಕ್ಕಾಗಿ ಮಂಡಳಿಯು ನೀಡಿದ ಪ್ರತಿಯೊಂದು ಬಂಧಪತ್ರ, ಬಾಧ್ಯತೆ, ಡಿಬೆಂಚರ್ ಅಥವಾ ಇತರ ಭದ್ರತಾ ಪತ್ರವು ಮಂಡಳಿಯ ಸಾಮಾನ್ಯ ಮೊಹರು ಹಾಕಿರುವ ಮತ್ತು ಕಾರ್ಯನಿರ್ವಾಹಕ ಸದಸ್ಯನು ಅಥವಾ ಈ ಸಂಬಂಧವಾಗಿ ಮಂಡಳಿಯಿಂದ ಪ್ರಾಧಿಕೃತನಾದ ಯಾರೇ ಇತರ ಅಧಿಕಾರಿಯು ತಾನೇ ಸಹಿ ಮಾಡಿರುವ ಒಂದು ಪತ್ರವಾಗಿರತಕ್ಕದ್ದು.

6. **ಭದ್ರತಾ ಪತ್ರಗಳ ರಿಜಿಸ್ಟರುಗಳನ್ನು ಇಡುವುದು.–** ಬಂಧಪತ್ರಗಳು, ಡಿಬೆಂಚರುಗಳು ಮತ್ತು ಇತರ ಭದ್ರತಾ ಪತ್ರಗಳ ರಿಜಿಸ್ಟರುಗಳನ್ನು ಮಂಡಳಿಯು ಇಡತಕ್ಕದ್ದು. ಅದರಲ್ಲಿ, ಪ್ರತಿಯೊಂದು ಅಂಥ ಬಂಧಪತ್ರದ, ಡಿಬೆಂಚರಿನ ಅಥವಾ ಇತರ ಭದ್ರತಾ ಪತ್ರಗಳ ಸಂಖ್ಯೆ ಮತ್ತು ದಿನಾಂಕವನ್ನು ಮತ್ತು ಆ ಮೂಲಕ ಭದ್ರತೆ ಒದಗಿಸಲಾದ ಮೊತ್ತವನ್ನು ಮತ್ತು ಅವುಗಳ ಪಕ್ಷಕಾರರ ಹೆಸರುಗಳನ್ನು ಮತ್ತು ಅವರ ವಿಳಾಸಗಳನ್ನು ಮತ್ತು ಅದಕ್ಕೆ ಸಂಬಂಧಿಸಿದ ಎಲ್ಲ ಇತರ ಅಗತ್ಯ ವಿವರಗಳನ್ನು ನಮೂದಿಸತಕ್ಕದ್ದು.

7. **ಭದ್ರತಾ ಪತ್ರಗಳ ವರ್ಗಾವಣೆಗಾಗಿ ನೀಡಬಹುದಾದ ಸೂಚನೆಗಳು.–** ಯಾವುದೇ ಬಂಧಪತ್ರ, ಡಿಬೆಂಚರ್ ಅಥವಾ ಇತರ ಭದ್ರತಾ ಪತ್ರಗಳ ವರ್ಗಾವಣೆಯನ್ನು ನಿಯಂತ್ರಿಸುವುದಕ್ಕಾಗಿ ಮಂಡಳಿಯು, ತಾನು ವಿಹಿತವೆಂದು ಭಾವಿಸಬಹುದಾದ ಸೂಚನೆಗಳನ್ನು ಕಾಲಕಾಲಕ್ಕೆ ನೀಡಬಹುದು. ಆದರೆ, ಅಂಥ ಸೂಚನೆಗಳ ಸುಸ್ಪಷ್ಟ ತಿಳಿವಳಿಕೆ ಅದರಲ್ಲಿ ಕಂಡು ಬಂದ ಹೊರತು ಯಾವುದೇ ಬಂಧಪತ್ರ, ಡಿಬೆಂಚರ್ ಅಥವಾ ಇತರ ಭದ್ರತಾಪತ್ರದ ಧಾರಕನನ್ನು ಅಥವಾ ವರ್ಗಾವಣೆ ಪಡೆದವನನ್ನು ಬಾಧಕಗೊಳಿಸತಕ್ಕದ್ದಲ್ಲ.

8. **ಕೆಲವು ಉದ್ದೇಶಗಳಿಗಾಗಿ ಮಂಡಳಿಯ ಸ್ವತ್ತನ್ನು ವಹಿಸಿಕೊಡುವುದು ಅಥವಾ ಹಸ್ತಾಂತರಿಸುವುದು .–** ಮಂಡಳಿಯು, ಹಿಂದೆ ಹೇಳಿದಂಥ ಯಾವುವೇ ಬಂಧಪತ್ರಗಳ, ಡಿಬೆಂಚರುಗಳ ಅಥವಾ ಇತರ ಭದ್ರತಾಪತ್ರಗಳ ಸಂದಾಯವನ್ನು ಅಥವಾ ಹಿಂದೆ ಹೇಳಲಾದಂತೆ ಸಾಲ ಪಡೆದ ಹಣವನ್ನು ಬಡ್ಡಿಯೊಂದಿಗೆ ಸಂದಾಯ ಮಾಡುವುದನ್ನು ಅಥವಾ ಯಾವುದೇ ಕರಾರಿನ ಮೇರೆಗೆ ಅಥವಾ ಅನ್ಯಥಾ ಸಂದಾಯ ಮಾಡಬೇಕಾದ ಮೊತ್ತದ ಸಂಬಂಧದಲ್ಲಿ ಭದ್ರತೆ ಒದಗಿಸುವ ಉದ್ದೇಶಕ್ಕಾಗಿ ಮಂಡಳಿಯು ತಾನು ವಿಹಿತವೆಂದು ಭಾವಿಸಬಹುದಾದಂತೆ ಮಂಡಳಿಯ ರಾಜಸ್ವವೂ ಸೇರಿದಂತೆ ಅದರ ಯಾವುದೇ ಸ್ವತ್ತನ್ನು ನ್ಯಾಸಧಾರಿಗಳಿಗೆ ವಹಿಸಿಕೊಡುವ ಅಥವಾ ಹಸ್ತಾಂತರಿಸುವ ಮೂಲಕ ಯಾವುದೇ ಏರ್ಪಾಟನ್ನು ಮಾಡಬಹುದು ಅಥವಾ ಕಾರ್ಯಗತಗೊಳಿಸಬಹುದು.

9. **ಡಿಬೆಂಚರುಗಳನ್ನು ಸಾಮಾನ್ಯವಾಗಿ ಧಾರಕನಿಗೆ ಸಂದಾಯ ಮಾಡುವುದು.–** ಮಂಡಳಿಯು ಅನ್ಯಥಾ ನಿರ್ಣಯಿಸದ ಹೊರತು, ಮಂಡಳಿಯು ನೀಡಬಹುದಾದ ಯಾವುವೇ ಡಿಬೆಂಚರುಗಳನ್ನು ಬಂಡವಾಳದ ಹಣ ಮತ್ತು ಆ ಮೂಲಕ ಪ್ರಾಪ್ತವಾದ ಬಡ್ಡಿಯನ್ನು ಧಾರಕನಿಗೆ ಸಂದಾಯ ಮಾಡುವಂತೆ ಹಾಗೂ ಮಂಡಳಿ ಮತ್ತು ಅವುಗಳನ್ನು ಯಾವ ವ್ಯಕ್ತಿಗಳಿಗೆ ನೀಡಬಹುದಾಗಿದೆಯೋ ಆ ವ್ಯಕ್ತಿಗಳ ನಡುವೆ ಯಾವುವೇ ಈಕ್ವಿಟಿಗಳಿಂದ ಆದು ಮುಕ್ತವಾಗಿರುವಂತೆ ಹಾಗೆ ರೂಪಿಸಬಹುದು.

10. **ಖಾತರಿಗಳ ಸಂದರ್ಭದಲ್ಲಿ ಸರ್ಕಾರದ ಅನುಮೋದನೆ.–** ಯಾವ ಭದ್ರತೆಯ ಸಂಬಂಧದಲ್ಲಿ ಅಸಲು ಮತ್ತು ಬಡ್ಡಿಯ ಸಂದಾಯದ ಬಗ್ಗೆ ರಾಜ್ಯ ಸರ್ಕಾರವು ಖಾತರಿ ನೀಡಿದೆಯೋ ಆ ಭದ್ರತೆಯನ್ನು, ಅಂಥ ಭದ್ರತೆಯ ಮೊತ್ತದ ಬೆಲೆ, ಬಡ್ಡಿಯ ದರ, ದಿನಾಂಕ, ನೀಡುವ ವಿಧಾನ, ನೀಡಿಕೆಯ ಉತ್ಪತ್ತಿಗಳ ವಿನಿಯೋಗದ ಮತ್ತು ಉತ್ಪತ್ತಿಗಳ ಮರು ಸಂದಾಯದ ಏರ್ಪಾಟುಗಳು ಇವುಗಳ ಬಗ್ಗೆ ರಾಜ್ಯ ಸರ್ಕಾರವು ಪೂರ್ವಾನುಮೋದನೆ ನೀಡುವವರೆಗೆ ಭದ್ರತಾ ಪತ್ರಗಳನ್ನು ಒದಗಿಸತಕ್ಕದ್ದಲ್ಲ ಅಥವಾ ನೀಡತಕ್ಕದ್ದಲ್ಲ ಮತ್ತು ರಾಜ್ಯ ಸರ್ಕಾರದಿಂದ ಅಂಥದೇ ಅನುಮೋದನೆ ಪಡೆಯದೆ ಅಂಥ ಯಾವುವೇ ಏರ್ಪಾಡುಗಳಲ್ಲಿ ಯಾವುದೇ ವ್ಯತ್ಯಾಸ ಮಾಡತಕ್ಕದ್ದಲ್ಲ.

## ಅಧ್ಯಾಯ – IV

## ಮಂಡಳಿಯು ಒದಗಿಸಬೇಕಾದ ವಾರ್ಷಿಕ ಹಣಕಾಸು ವಿವರ ಪತ್ರ ಮತ್ತು ಇತರ ವಿವರಪತ್ರಗಳು ಹಾಗೂ ವರದಿಗಳು ಮತ್ತು ಲೆಕ್ಕಪತ್ರಗಳನ್ನು ನಿರ್ವಹಿಸುವ ರೀತಿ.

11. **ಆಯವ್ಯಯ ಮತ್ತು ಕಾಮಗಾರಿಯ ಯೋಜನೆ.–** (1) ವಾರ್ಷಿಕ ಹಣಕಾಸು ವಿವರಪತ್ರವು ನಮೂನೆ 1 ರಲ್ಲಿರತಕ್ಕದ್ದು ಹಾಗೂ ಕಾಮಗಾರಿ ಯೋಜನೆಯ ವಿವರಣೆಯು ನಮೂನೆ 2 ರಲ್ಲಿರತಕ್ಕದ್ದು.

(2) ಮಂಡಳಿಯು, ತನ್ನ ಕಾಮಗಾರಿ ಯೋಜನೆಯ ಜೊತೆಗೆ ಮುಂದುವರಿಸಿದ ಯೋಜನೆಗಳ ಸಂಬಂಧದಲ್ಲಿ ಹಿಂದಿನ ವರ್ಷಗಳಲ್ಲಿ ಸಾಧಿಸಿದ ಪ್ರಗತಿ, ಮಾಡಲಾಗಿರುವ ವೆಚ್ಚ ಮತ್ತು ಪ್ರಾಪ್ತವಾದ ಮೊತ್ತ ಇವುಗಳ ಜೊತೆಗೆ ಪ್ರತಿಯೊಂದು ಯೋಜನೆಯ ಇತಿವೃತ್ತ ಮತ್ತು ವಿವರಗಳನ್ನು ನೀಡುವ ಒಂದು ಟಿಪ್ಪಣಿಯನ್ನು ಸಹ ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು. ಆ ಟಿಪ್ಪಣಿಯು, ವಿಶೇಷವಾಗಿ ಪ್ರತಿಯೊಂದು ಯೋಜನೆಯ ಆರ್ಥಿಕ ಪರಿಣಾಮಗಳನ್ನು ನಿರೂಪಿಸತಕ್ಕದ್ದು.

12. **ಲೆಕ್ಕಪತ್ರಗಳನ್ನು ಇಡುವ ವಿಧಾನ ಮತ್ತು ಅವುಗಳ ನಿರ್ವಹಣೆ.–** ಮಂಡಳಿಯ ಲೆಕ್ಕಪತ್ರಗಳನ್ನು ವಾಣಿಜ್ಯ ಕ್ರಮದಲ್ಲಿ ಸಿದ್ಧಪಡಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

(1) ಮಂಡಳಿಯು,–

(ಎ) ತಾನು ಸ್ವೀಕರಿಸಿದ ಎಲ್ಲ ಹಣಕ್ಕೆ;

(ಬಿ) ಆರ್ಥಿಕ ಸ್ವರೂಪದ ಎಲ್ಲ ಇತರ ವ್ಯವಹಾರಗಳಿಗೆ;

(ಸಿ) ಮಂಡಳಿಯ ಆಸ್ತಿ ಮತ್ತು ಹೊಣೆಗಾರಿಕೆಗಳಿಗೆ

– ಸಂಬಂಧಿಸಿದಂತೆ ಸೂಕ್ತ ಲೆಕ್ಕಪುಸ್ತಕಗಳನ್ನು ತನ್ನ ಕೇಂದ್ರ ಕಚೇರಿಯಲ್ಲಿ ಇಡತಕ್ಕದ್ದು.

(2) ಮಂಡಳಿಯ ಲೆಕ್ಕಪತ್ರಗಳನ್ನು, ವಾಣಿಜ್ಯ ಲೆಕ್ಕಪತ್ರಗಳನ್ನಿಡುವ ತತ್ವಗಳಿಗನುಸಾರವಾಗಿ ದ್ವಿ–ನಮೂದು ಪದ್ಧತಿಯಲ್ಲಿ ನಿರ್ವಹಿಸತಕ್ಕದ್ದು.

(3) 24ನೇ ಪ್ರಕರಣದ ಅಡಿಯಲ್ಲಿ ಮಂಡಳಿಯು ಸಿದ್ಧಪಡಿಸತಕ್ಕ ಮತ್ತು ಸರ್ಕಾರಕ್ಕೆ ಸಲ್ಲಿಸತಕ್ಕ ವಾರ್ಷಿಕ ಲೆಕ್ಕಪತ್ರಗಳ ವಿವರಪತ್ರವು ನಮೂನೆ 3ರಲ್ಲಿರತಕ್ಕದ್ದು.

13. **ವಾರ್ಷಿಕ ವರದಿ ಮತ್ತು ಇತರ ವಿವರಪಟ್ಟಿಕೆಗಳು.–** 24 ನೇ ಪ್ರಕರಣದ (3) (ಬಿ) ಉಪ ಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರಕ್ಕೆ ಸಲ್ಲಿಸಬೇಕಾದ ಮಂಡಳಿಯ ಕಾರ್ಯನಿರ್ವಹಣೆಯ ವಾರ್ಷಿಕ ವರದಿಯ ಇತರ ವಿವರಗಳು ಈ ಮುಂದಿನ ವಿವರಗಳನ್ನು ಒಳಗೊಂಡಿರತಕ್ಕದ್ದು,–

(ಎ) ರಾಜ್ಯ ಸರ್ಕಾರವು ಮಂಡಳಿಗೆ ವಹಿಸಿದ ಕೈಗಾರಿಕಾ ಪ್ರದೇಶಗಳು ಅಥವಾ ಕೈಗಾರಿಕಾ ಎಸ್ಟೇಟ್‌ಗಳು;

(ಬಿ) ವರದಿಯ ವರ್ಷದ ಕಾಮಗಾರಿ ಯೋಜನೆ;

(ಸಿ) ನಿರ್ದಿಷ್ಟವಾಗಿ ಈ ಮುಂದಿನವುಗಳಿಗೆ ಸಂಬಂಧಿಸಿದಂತೆ ವರ್ಷದಲ್ಲಿ ಆದ ಕಾಮಗಾರಿಯ ಪ್ರಗತಿ:–

(i) ಸ್ವಾಧೀನಪಡಿಸಿಕೊಳ್ಳಲಾದ ಭೂಮಿ;

(ii) ಸಾಧಿಸಲಾದ ಅಭಿವೃದ್ಧಿ;

(iii) ಒದಗಿಸಲಾದ ಮೂಲಭೂತ ಸೌಕರ್ಯಗಳು;

(iv) ಕೈಗಾರಿಕಾ ಪ್ರದೇಶ ಅಥವಾ ಎಸ್ಟೇಟ್ ಗಳಲ್ಲಿ ಸ್ಥಾಪಿಸಲಾದ ಕೈಗಾರಿಕೆಗಳು; ಮತ್ತು

(v) ಅಧಿನಿಯಮದ ಅಡಿಯಲ್ಲಿ ಮತ್ತು ಅದಕ್ಕೆ ಅನುಸಾರವಾಗಿ ಮಂಡಳಿಗೆ ವಹಿಸಲಾದ ಮತ್ತು ಅದು ಕೈಗೊಂಡ ಯಾವುದೇ ಇತರ ಚಟುವಟಿಕೆಗಳ ವಿವರಗಳು;

(ಡಿ) ಮಂಡಳಿಗೆ ಒದಗಿಸಲಾದ ಹಣಕಾಸು ;

(ಇ) ಮಂಡಳಿಯ ರಚನೆಯಲ್ಲಿ ಯಾವುವಾದರೂ ಬದಲಾವಣೆಗಳು, ಆಗಿದ್ದಲ್ಲಿ ಅವು;

(ಎಫ್) ಮಂಡಳಿಯ ಸಿಬ್ಬಂದಿ ಮತ್ತು ಅದರ ವ್ಯವಹಾರ ನಿರ್ವಹಣೆ;

(ಜಿ) ರಾಜ್ಯಸರ್ಕಾರವು ಪಾಲಿಸಲು ಮಂಡಳಿಗೆ ನೀಡಿದ ನಿರ್ದೇಶನಗಳು;

(ಎಚ್) ವೆಚ್ಚ, ರಾಜಸ್ವ ಹೊಣೆಗಾರಿಕೆಗಳು ಮತ್ತು ಆಸ್ತಿಗಳನ್ನು ತೋರಿಸುವ ಸರಕು ಜಡತಿ

(2) ಮಂಡಳಿಯು, ವರ್ಷದ ಮೊದಲ ಆರು ತಿಂಗಳುಗಳ ತನ್ನ ಕಾರ್ಯ ನಿರ್ವಹಣೆಯನ್ನು ಮತ್ತು ಲೆಕ್ಕಪತ್ರಗಳನ್ನು ಆಧರಿಸಿದ ಒಂದು ಪ್ರಗತಿ ವರದಿಯನ್ನು ಪ್ರತಿಯೊಂದು ವರ್ಷದ ನವೆಂಬರ್ ಮೊದಲ ದಿನದ ಹೊತ್ತಿಗೆ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

## ಅಧ್ಯಾಯ – V
## ಸಂಕೀರ್ಣ

14. **ರಾಜ್ಯ ಸರ್ಕಾರದ ಅಧಿಕಾರಗಳ ಪ್ರತ್ಯಾಯೋಜನೆ.–** 28 ನೇ ಪ್ರಕರಣದ (2), (3), (6), (7) ಮತ್ತು (8) ನೇ ಉಪ ಪ್ರಕರಣಗಳ ಮತ್ತು 29ನೇ ಪ್ರಕರಣದ (1), (2) ಮತ್ತು (3) ನೇ ಉಪ ಪ್ರಕರಣಗಳ ಅಡಿಯಲ್ಲಿನ ರಾಜ್ಯ ಸರ್ಕಾರದ ಅಧಿಕಾರಗಳನ್ನು ಅವರವರ ಅಧಿಕಾರ ವ್ಯಾಪ್ತಿಯೊಳಗಿನ ಕಂದಾಯ ಉಪವಿಭಾಗಗಳ ಪ್ರಭಾರದಲ್ಲಿನ ಸಹಾಯಕ ಕಮೀಷನರುಗಳಿಗೆ [1][ಅಥವಾ ಕಾಲ ಕಾಲಕ್ಕೆ ರಾಜ್ಯ ಸರ್ಕಾರವು ನಿಗದಿಪಡಿಸಬಹುದಾದಂಥ ಅಧಿಕಾರವ್ಯಾಪ್ತಿ ಹೊಂದಿರುವ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿನ ವಿಶೇಷ ಭೂ ಸ್ವಾಧೀನ ಅಧಿಕಾರಿಗಳಿಗೆ ಅಥವಾ ಹೆಚ್ಚುವರಿ ವಿಶೇಷ ಭೂ ಸ್ವಾಧೀನ ಅಧಿಕಾರಿಗಳಿಗೆ ಈ ಮೂಲಕ ಪ್ರತ್ಯಾಯೋಜಿಸಿದೆ:

ಪರಂತು, ಅಂಥ ಅಧಿಕಾರಗಳನ್ನು ವಿಶೇಷ ಭೂ ಸ್ವಾಧೀನ ಅಧಿಕಾರಿಗೆ ಅಥವಾ ಹೆಚ್ಚುವರಿ ವಿಶೇಷ ಭೂ ಸ್ವಾಧೀನ ಅಧಿಕಾರಿಗೆ ಪ್ರತ್ಯಾಯೋಜಿಸಲಾಗಿರುವಲ್ಲಿ, ಕಂದಾಯ ಉಪ ವಿಭಾಗದ ಪ್ರಭಾರದಲ್ಲಿನ ಸಹಾಯಕ ಕಮೀಷನರನು ವಿಶೇಷ ಭೂ ಸ್ವಾಧೀನ ಅಧಿಕಾರಿಯ ಅಥವಾ ಸಂದರ್ಭಾನುಸಾರ, ಹೆಚ್ಚುವರಿ ವಿಶೇಷ ಭೂ ಸ್ವಾಧೀನ ಅಧಿಕಾರಿಯ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶಗಳಲ್ಲಿ ಅಧಿಕಾರಗಳನ್ನು ಚಲಾಯಿಸುವುದು ನಿಂತುಹೋಗತಕ್ಕದ್ದು][1].

1. ಅಧಿಸೂಚನೆ ಸಂಖ್ಯೆ ಸಿಐ 319 ಎಸ್‌ಪಿಕ್ಯೂ 82, ದಿನಾಂಕ 10ನೇ ಅಕ್ಟೋಬರ್ 1983(20.10.83)ರ ಮೂಲಕ ಸೇರಿಸಲಾಗಿದೆ.

ನಮೂನೆ–I

[11(1)ನೇ ನಿಯಮವನ್ನು ನೋಡಿ]

ವಾರ್ಷಿಕ ಹಣಕಾಸು ವಿವರಪತ್ರ

**I. ಕರ್ನಾಟಕ ಕೈಗಾರಿಕಾ ಪ್ರದೇಶಗಳ ಅಭಿವೃದ್ಧಿ ಮಂಡಳಿಯ ಆಯವ್ಯಯ ಅಂದಾಜುಗಳು**

ರಾಜಸ್ವ ಸ್ವೀಕೃತಿಗಳು

| ಉಪ ಶೀರ್ಷಿಕೆ | ಹಿಂದಿನ ಮೂರು ವರ್ಷಗಳ ವಾಸ್ತವಿಕಗಳು | ಪ್ರಸ್ತುತ ವರ್ಷದ ಆಯವ್ಯಯ | ಪ್ರಸ್ತುತ ವರ್ಷದ ಪರಿಷ್ಕೃತ ಅಂದಾಜು ಗಳು | 20–20ನೇ ಸಾಲಿನ ಆಯವ್ಯಯ ಅಂದಾಜು ಗಳು | ಷರಾ (ಹೆಚ್ಚಳ ವಾದದ್ದಕ್ಕೆ/ ಕಡಿಮೆ ಯಾದುದ್ದಕ್ಕೆ ವಿವರಣೆ) |
|---|---|---|---|---|---|
| 1 | 2 | 3 | 4 | 5 | 6 |
| 1. ವೆಚ್ಚದ ವಸೂಲಿಗಳು | | | | | |
| 2. ಟೆಂಡರ್ ನಮೂನೆಗಳ ಮಾರಾಟ | | | | | |
| 3. ಗುತ್ತಿಗೆದಾರರಿಂದ ದಂಡಗಳು, ಮುಂತಾದವುಗಳ ವಸೂಲಿಗಳು | | | | | |
| 4. ಸಲಕರಣೆಗಳು ಮತ್ತು ಸ್ಥಾವರಗಳ ಬಾಡಿಗೆ ವೆಚ್ಚ, ಸಾಮಗ್ರಿಗಳ ಮಾರಾಟದ ಮೇಲ್ವಿಚಾರಣಾ ವೆಚ್ಚಗಳು ಮತ್ತು ಇತರ ಅಂಥವೇ ಸ್ವೀಕೃತಿಗಳು | | | | | |
| 5. ಗುತ್ತಿಗೆಗೆ ನೀಡಲಾದ ಭೂಮಿಯ ವಾರ್ಷಿಕ ಬಾಡಿಗೆ | | | | | |
| 6. ಕಟ್ಟಡದ ವಾರ್ಷಿಕ ಬಾಡಿಗೆ | | | | | |
| 7. ಠೇವಣಿಗಳ ಮುಟ್ಟುಗೋಲು | | | | | |
| 8. ಸಂಕೀರ್ಣ | | | | | |
| 9. ರಾಜ್ಯ ಸರ್ಕಾರದಿಂದ ಧನ ಸಹಾಯಗಳು. ಕಡಿತ. . . . ಮರುಪಾವತಿಗಳು. . . . ಒಟ್ಟು ಸ್ವೀಕೃತಿಗಳು | | | | | |
| | | | | | |

**II. ಕರ್ನಾಟಕ ಕೈಗಾರಿಕಾ ಪ್ರದೇಶಗಳ ಅಭಿವೃದ್ಧಿ ಮಂಡಳಿಯ ಆಯವ್ಯಯ ಅಂದಾಜುಗಳು**

[ರಾಜಸ್ವ ವೆಚ್ಚ]

| | ಉಪ ಶೀರ್ಷಿಕೆ | ಹಿಂದಿನ ಮೂರು ವರ್ಷಗಳ ವಾಸ್ತವಿಕಗಳು | ಪ್ರಸ್ತುತ ವರ್ಷದ ಆಯವ್ಯಯ | ಪ್ರಸ್ತುತ ವರ್ಷದ ಪರಿಷ್ಕೃತ ಅಂದಾಜುಗಳು | 20–20ನೇ ಸಾಲಿನ ಆಯವ್ಯಯ ಅಂದಾಜುಗಳು | ಷರಾ (ಹೆಚ್ಚಳವಾದದ್ದಕ್ಕೆ/ ಕಡಿಮೆಯಾದುದಕ್ಕೆ ವಿವರಣೆಗಳು) |
|---|---|---|---|---|---|---|
| | 1 | 2 | 3 | 4 | 5 | 6 |
| ಎ. | ಸಿಬ್ಬಂದಿ [ಆಡಳಿತ]<br>(ಎ) ಅಧಿಕಾರಿಗಳ ವೇತನ<br>(ಬಿ) ಸಿಬ್ಬಂದಿಯ ವೇತನ<br>(ಸಿ) ಭತ್ಯೆಗಳು ಮತ್ತು ಗೌರವಧನಗಳು<br>(ಡಿ) ಸಾದಿಲ್ವಾರುಗಳು | | | | | |
| | ಒಟ್ಟು | | | | | |

| | ಉಪ ಶೀರ್ಷಿಕೆ | ಹಿಂದಿನ ಮೂರು ವರ್ಷಗಳ ವಾಸ್ತವಿಕಗಳು | ಪ್ರಸ್ತುತ ವರ್ಷದ ಆಯವ್ಯಯ | ಪ್ರಸ್ತುತ ವರ್ಷದ ಪರಿಷ್ಕೃತ ಅಂದಾಜುಗಳು | 20–20ನೇ ಸಾಲಿನ ಆಯವ್ಯಯ ಅಂದಾಜುಗಳು | ಷರಾ (ಹೆಚ್ಚಳವಾದದ್ದಕ್ಕೆ/ ಕಡಿಮೆಯಾದುದಕ್ಕೆ ವಿವರಣೆಗಳು) |
|---|---|---|---|---|---|---|
| | 1 | 2 | 3 | 4 | 5 | 6 |
| **I–ಬಿ.** | **ಸಿಬ್ಬಂದಿ [ಕಾರ್ಯನಿರ್ವಾಹಕ]**<br>(ಎ) ಅಧಿಕಾರಿಗಳ ವೇತನ<br>(ಬಿ) ಸಿಬ್ಬಂದಿಯ ವೇತನ<br>(ಸಿ) ಭತ್ಯೆಗಳು ಮತ್ತು ಗೌರವಧನಗಳು<br>(ಡಿ) ಸಾದಿಲ್ವಾರುಗಳು | | | | | |
| | ಒಟ್ಟು | | | | | |
| **I–ಸಿ.** | **ಸಿಬ್ಬಂದಿ [ಲೆಕ್ಕಪತ್ರಗಳು]**<br>(ಎ) ಅಧಿಕಾರಿಗಳ ವೇತನ<br>(ಬಿ) ಸಿಬ್ಬಂದಿಯ ವೇತನ<br>(ಸಿ) ಭತ್ಯೆಗಳು ಮತ್ತು ಗೌರವಧನಗಳು<br>(ಡಿ) ಸಾದಿಲ್ವಾರುಗಳು | | | | | |
| | ಒಟ್ಟು | | | | | |
| **II.** | ಪಿಂಚಣಿ ಮತ್ತು ರಜಾ ವಂತಿಗೆಗಳು | | | | | |
| **III.** | ಸಿಬ್ಬಂದಿ ಭವಿಷ್ಯನಿಧಿಗೆ ಮತ್ತು ಇತರ ಸೇವಾ ನಿಧಿಗಳಿಗೆ ಮಂಡಳಿಯ ವಂತಿಗೆ | | | | | |
| **IV.** | ಬಂಡವಾಳಗಳ ಮೇಲಿನ ಬಡ್ಡಿ (ಬಡ್ಡಿಯ ದರಗಳನ್ನು ತಿಳಿಸುವುದು) | | | | | |
| **V.** | ಹೊಸ ಸಾಲಗಳನ್ನು ನೀಡುವುದಕ್ಕೆ ಸಂಬಂಧಿಸಿದ ವೆಚ್ಚ | | | | | |
| **VI.** | **ಸವಕಳಿ.–**<br>(ಎ) ವಿಶೇಷ ಸಲಕರಣೆಗಳು ಮತ್ತು ಸ್ಥಾವರಗಳು<br>(ಬಿ) ವಾಹನಗಳು<br>(ಸಿ) ಕಟ್ಟಡಗಳು<br>(ಡಿ) ಇತರ ಬಾಬುಗಳು | | | | | |
| **VII.** | **ನಿರ್ವಹಣೆ ಮತ್ತು ದುರಸ್ತಿಗಳು.–**<br>(ಎ) ಸಲಕರಣೆಗಳ ಮತ್ತು ಸ್ಥಾವರಗಳ ದುರಸ್ತಿಗಳು (ವಿಶೇಷ)<br>(ಬಿ) ಸಲಕರಣೆಗಳ ಮತ್ತು ಸ್ಥಾವರಗಳ ದುರಸ್ತಿಗಳು (ಸಾಮಾನ್ಯ) | | | | | |
| **VIII.** | ಪುರಸಭಾ ತೆರಿಗೆಗಳು ಮತ್ತು ಇತರ ತೆರಿಗೆಗಳು | | | | | |
| **IX.** | ಸಂಕೀರ್ಣ ವೆಚ್ಚ<br>ರಾಜಸ್ವ ಲೆಕ್ಕದ ಮೇಲಿನ ನಿವ್ವಳ ವೆಚ್ಚ | | | | | |
| | ಒಟ್ಟು | | | | | |

### III. ಕರ್ನಾಟಕ ಕೈಗಾರಿಕಾ ಪ್ರದೇಶಗಳ ಅಭಿವೃದ್ಧಿ ಮಂಡಲಿಯ ಆಯವ್ಯಯ ಅಂದಾಜುಗಳು

| | ಉಪ ಶೀರ್ಷಿಕೆ | ಹಿಂದಿನ ಮೂರು ವರ್ಷಗಳ ವಾಸ್ತವಿಕಗಳು | ಪ್ರಸ್ತುತ ವರ್ಷದ ಆಯವ್ಯಯ | ಪ್ರಸ್ತುತ ವರ್ಷದ ಪರಿಷ್ಕೃತ ಅಂದಾಜುಗಳು | 20–20ನೇ ಸಾಲಿನ ಆಯವ್ಯಯ ಅಂದಾಜುಗಳು | ಷರಾ (ಹೆಚ್ಚಳವಾದದ್ದಕ್ಕೆ/ ಕಡಿಮೆಯಾದುದಕ್ಕೆ ವಿವರಣೆಗಳು) |
|---|---|---|---|---|---|---|
| | 1 | 2 | 3 | 4 | 5 | 6 |
| 1 | ವರ್ಷದ ಆರಂಭದಲ್ಲಿ ಇದ್ದಂತೆ ಮಂಡಳಿಯಲ್ಲಿನ ಶಿಲ್ಕು | | | | | |
| 2 | ವರ್ಷದ ಅವಧಿಯಲ್ಲಿ ಸರ್ಕಾರದಿಂದ ಪಡೆದ ಸಾಲಗಳು | | | | | |
| 3 | ಇತರ ಸಾಲಗಳು (ಸಾರ್ವಜನಿಕ ಅಥವಾ ಖಾಸಗಿ) | | | | | |
| 4 | ಪ್ಲಾಟುಗಳ ಮಾರಾಟ | | | | | |
| 5 | ಕಟ್ಟಡಗಳ ಮಾರಾಟ | | | | | |
| 6 | ಇತರ ಬಂಡವಾಳ ಸ್ವೀಕೃತಿ | | | | | |
| 7 | ಅಮಾನತು ಲೆಕ್ಕಗಳು | | | | | |
| | ಒಟ್ಟು | | | | | |

### IV. ಕರ್ನಾಟಕ ಕೈಗಾರಿಕಾ ಪ್ರದೇಶಗಳ ಅಭಿವೃದ್ಧಿ ಮಂಡಳಿಯ ಆಯವ್ಯಯ ಅಂದಾಜುಗಳು (ಬಂಡವಾಳ ಲೆಕ್ಕದ ವೆಚ್ಚ)

| | ಉಪ ಶೀರ್ಷಿಕೆ | ಹಿಂದಿನ ವರ್ಷದ ಲೆಕ್ಕಪತ್ರಗಳು | ಪ್ರಸ್ತುತ ವರ್ಷದ ಆಯವ್ಯಯ | ಪ್ರಸ್ತುತ ವರ್ಷದ ಪರಿಷ್ಕೃತ ಅಂದಾಜುಗಳು | 20–20ನೇ ಸಾಲಿನ ಆಯವ್ಯಯ ಅಂದಾಜುಗಳು | ಷರಾ (ಹೆಚ್ಚಳವಾದದ್ದಕ್ಕೆ/ ಕಡಿಮೆಯಾದುದ್ದಕ್ಕೆ ವಿವರಣೆಗಳು) |
|---|---|---|---|---|---|---|
| | 1 | 2 | 3 | 4 | 5 | 6 |
| *1 | ಪ್ರಗತಿಯಲ್ಲಿರುವ ಕಾಮಗಾರಿ | | | | | |
| *2 | ಭೂಮಿಯ ಬೆಲೆ | | | | | |
| *3 | (ಎ) ಹೊಸ ಕಾಮಗಾರಿ – ಭೂಮಿಯ ಬೆಲೆಯನ್ನು ಹೊರತುಪಡಿಸಿ<br>(ಬಿ) ಭೂಮಿಯ ಬೆಲೆ | | | | | |
| 4 | ಬಂಡವಾಳಕ್ಕೆ ಖರ್ಚು ಹಾಕಲಾದ ರಾಜಸ್ವ ಲೆಕ್ಕದಿಂದ ವರ್ಗಾವಣೆಯಾದ ಸಿಬ್ಬಂದಿ ವೆಚ್ಚಗಳು | | | | | |
| 5 | ಸಲಕರಣೆಗಳು ಮತ್ತು ಸ್ಥಾವರಗಳು | | | | | |
| 6 | ಸವಕಳಿ ನಿಧಿಗೆ ವರ್ಗಾವಣೆಯಾದ ಮೊಬಲಗು | | | | | |
| 7 | ಇತರ ನಿಧಿಗಳಿಗೆ ವರ್ಗಾವಣೆಯಾದ ಮೊಬಲಗು | | | | | |
| 8 | ಅಮಾನತು ಲೆಕ್ಕ | | | | | |
| | ಒಟ್ಟು | | | | | |

* ಪ್ರತಿಯೊಂದು ಯೋಜನೆಯ ವಿವರಗಳನ್ನು ಭಾಗ V ರಲ್ಲಿ ಒದಗಿಸತಕ್ಕದ್ದು.

## V. ಕರ್ನಾಟಕ ಕೈಗಾರಿಕಾ ಪ್ರದೇಶಗಳ ಅಭಿವೃದ್ಧಿ ಮಂಡಳಿಯ ಆಯವ್ಯಯ ಅಂದಾಜುಗಳು ಪ್ರಗತಿಯಲ್ಲಿರುವ ಕಾಮಗಾರಿಯ – ಹೊಸ ಕಾಮಗಾರಿಗಳ ವಿವರಗಳು

| ಯೋಜನೆಯ ಹೆಸರು | ಬಂಡವಾಳ ವೆಚ್ಚದ ಬಾಬು | ಕಾಮಗಾರಿಯ ಅಂದಾಜು ವೆಚ್ಚ | ಹಿಂದಿನ ವರ್ಷದ ಮುಕ್ತಾಯದ ವೇಳೆಗೆ ಆದ ವೆಚ್ಚ | ಹಿಂದಿನ ವರ್ಷಕ್ಕೆ ಲೆಕ್ಕ | ಪ್ರಸ್ತುತ ವರ್ಷದ ಆಯವ್ಯಯ ಖರ್ಚು | ಪ್ರಸ್ತುತ ವರ್ಷದ ಪರಿಷ್ಕೃತ ಅಂದಾಜುಗಳು | 20–20ನೇ ಸಾಲಿನ ಆಯವ್ಯಯ ಅಂದಾಜುಗಳು | ಷರಾ (ಹೆಚ್ಚಳವಾದದ್ದಕ್ಕೆ/ ಕಡಿಮೆ ಯಾದದ್ದಕ್ಕೆ ವಿವರಣೆಗಳು) |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1. ಭೂ ಆರ್ಜನೆ | | | | | | | | |
| 2. ಮೋಜಣಿ ಮತ್ತು ಸೀಮಾನಿರ್ಣಯ | | | | | | | | |
| 3. ರಸ್ತೆಗಳು | | | | | | | | |
| 4. ಜಲ ಕಾಮಗಾರಿಗಳು | | | | | | | | |
| 5. ಒಳಚರಂಡಿ ವ್ಯವಸ್ಥೆ<br>(ಎ) ಮುಖ್ಯ ಕಾಮಗಾರಿಗಳು<br>(ಬಿ) ಕೊಳವೆ ಮಾರ್ಗಗಳು<br>(ಸಿ) ಒಳ ಚರಂಡಿ ಮಾರ್ಗಗಳು<br>(ಡಿ) ಒಳ ಚರಂಡಿ ನೀರು ವಿಲೇ ಸ್ಥಾವರಗಳು | | | | | | | | |
| 6. ವಿದ್ಯುಚ್ಛಕ್ತಿ<br>(ಎ) ಭೂಮಿಯ ಒಳಗಡೆ ಕೇಬಲ್‌ಗಳನ್ನು ಅಳವಡಿಸುವುದು<br>(ಬಿ) ಬೀದಿ ದೀಪದ ವ್ಯವಸ್ಥೆ | | | | | | | | |
| 7. ಕಟ್ಟಡಗಳು | | | | | | | | |
| 8. ಸೇತುವೆಗಳು | | | | | | | | |
| 9. ರೈಲ್ವೇ ಸೈಡಿಂಗುಗಳು | | | | | | | | |
| ಒಟ್ಟು | | | | | | | | |

## ನಮೂನೆ 2

[11(1) ನೇ ನಿಯಮ ನೋಡಿ]

### ಕಾಮಗಾರಿಯ ವಾರ್ಷಿಕ ಯೋಜನೆ

| ಕ್ರಮ ಸಂಖ್ಯೆ | ಯೋಜನೆಯ ಹೆಸರು | ಕಾಮಗಾರಿಯ ಅಂದಾಜು ವೆಚ್ಚ | ಯಾವ ವರ್ಷಕ್ಕಾಗಿ ಯೋಜನೆಯನ್ನು ಉದ್ದೇಶಿಸಲಾಗಿದೆಯೋ ಆ ವರ್ಷದ ಅಂದಾಜು ವೆಚ್ಚ | ಅಂದಾಜು ಸ್ವೀಕೃತಿಗಳು | ಕೈಗಾರಿಕೆಗಳಿಗೆ ಒದಗಿಸಿದ ಸೌಕರ್ಯಗಳ ಮತ್ತು ಸೌಲಭ್ಯಗಳ ಪ್ರಮುಖ ಲಕ್ಷಣಗಳು |
|---|---|---|---|---|---|
| 1 | 2 | 3 | 4 | 5 | 6 |
| | | | | | |

## ನಮೂನೆ 3

### . . . . . . . . . ರಂದು ಕೊನೆಗೊಂಡ ವರ್ಷಕ್ಕಾಗಿ ಕರ್ನಾಟಕ ಕೈಗಾರಿಕಾ ಪ್ರದೇಶಗಳ ಅಭಿವೃದ್ಧಿ ಮಂಡಳಿಯ ಆದಾಯ ಮತ್ತು ವೆಚ್ಚದ ಲೆಕ್ಕ

| ವೆಚ್ಚ | | ಸ್ವೀಕೃತಿಗಳು | |
|---|---|---|---|
| ಈ ಮುಂದಿನವುಗಳಿಗೆ, | ರೂ.ಗಳು | ಈ ಮುಂದಿನವುಗಳಿಂದ | ರೂ.ಗಳು |
| ಎ. (i) ನಿರ್ವಹಣೆ ಮತ್ತು ದುರಸ್ತಿಗಳು | | ಎ. ಮಾಡಲಾದ ಹೆಚ್ಚುವರಿ ಸಂದಾಯಗಳ ವಸೂಲಿಗಳು | |
| (ಎ) ಸಲಕರಣೆಗಳು ಮತ್ತು ಸ್ಥಾವರದ ದುರಸ್ತಿಗಳು (ವಿಶೇಷ) | | ಬಿ. ಟೆಂಡರ್ ನಮೂನೆಗಳ ಮಾರಾಟ | |
| | | ಸಿ. ಗುತ್ತಿಗೆದಾರರಿಂದ ದಂಡ ವಸೂಲಿಗಳು | |
| (ಬಿ) ಸಲಕರಣೆಗಳು ಮತ್ತು ಸ್ಥಾವರದ ದುರಸ್ತಿಗಳು (ಸಾಮಾನ್ಯ) | | ಡಿ. ಸಲಕರಣೆಗಳು ಮತ್ತು ಸ್ಥಾವರದ ಬಾಡಿಗೆ ವೆಚ್ಚಗಳು/ ಸಾಮಗ್ರಿಗಳ ಮಾರಾಟದ ಮೇಲಿನ ಮೇಲ್ವಿಚಾರಣಾ ವೆಚ್ಚಗಳು ಮತ್ತು ಇತರ ವಸೂಲಿಗಳು | |
| (ಸಿ) ಕಟ್ಟಡಗಳ ವಾರ್ಷಿಕ ದುರಸ್ತಿಗಳು ಮತ್ತು ನಿರ್ವಹಣೆ | | ಇ. ಮಂಡಳಿಯು ಗುತ್ತಿಗೆ ನೀಡಿದ ಭೂಮಿಯ ವಾರ್ಷಿಕ ಬಾಡಿಗೆ | |
| (ಡಿ) ವಾಹನಗಳ ದುರಸ್ತಿಗಳು ಮತ್ತು ನಿರ್ವಹಣೆ | | ಎಫ್. ಕಟ್ಟಡಗಳ ಬಾಡಿಗೆ | |
| | | ಜಿ. ಕೈಗಾರಿಕಾ ಎಸ್ಟೇಟ್‌ಗಳಿಂದ ಬಾಡಿಗೆಗಳು | |
| (ii) ಇತರೆ ವೆಚ್ಚ | | ಎಚ್. ಭೂ ವಿಲೇವಾರಿಯಿಂದ ಲಾಭಗಳು | |
| (ಎ) ಕಾನೂನು ಸಂಬಂಧೀ ವೆಚ್ಚಗಳು | | ಐ. ಸರ್ಕಾರದಿಂದ ಅನುದಾನಗಳು | |
| (ಬಿ) ಇತರೆ | | ಜೆ. ಠೇವಣಿಗಳ ಮುಟ್ಟುಗೋಲು | |
| | | ಕೆ. ಶುಲ್ಕಗಳು, ವೆಚ್ಚಗಳು ಇತ್ಯಾದಿ | |
| | | ಎಲ್. ನೀರು ಮತ್ತು ವಿದ್ಯುಚ್ಛಕ್ತಿ ಪೂರೈಕೆ | |
| **ಬಿ. ನಿರ್ಮಾಣ ವೆಚ್ಚಗಳು** | | ಎಂ. ಸಂಕೀರ್ಣ | |
| (i) ಸಿಬ್ಬಂದಿ ...ರೂ... | | | |
| (ii) ಸಾದಿಲ್ವಾರುಗಳು ...ರೂ... | | | |
| ಒಟ್ಟು | | | |
| ಶೇಕಡಾ ಕಳೆತ | | | |
| ಅಭಿವೃದ್ಧಿ ವೆಚ್ಚಕ್ಕೆ ವರ್ಗಾಯಿಸಿದುದು | | | |
| **ಸಿ. ಆಡಳಿತ ವೆಚ್ಚಗಳು** | | | |
| (ಎ) ಸಂಬಳಗಳು ಮತ್ತು ಭತ್ಯೆಗಳು | | | |
| (ಬಿ) ಪ್ರಯಾಣ ಭತ್ಯೆ | | | |
| (ಸಿ) ಸಾದಿಲ್ವಾರುಗಳು | | | |
| (ಡಿ) ಸಿಬ್ಬಂದಿ ಭವಿಷ್ಯನಿಧಿಗೆ ಮತ್ತು ಇತರ ಸೇವಾ ನಿಧಿಗೆ ವಂತಿಗೆ | | | |
| (ಇ) ರಜಾ ಮತ್ತು ಪಿಂಚಣಿ ವಂತಿಗೆ | | | |
| ಒಟ್ಟು | | | |

ಅಭಿವೃದ್ಧಿ ಮಂಡಳಿಗೆ ವರ್ಗಾಯಿಸಲಾದ ಶೇ
. . . . . . . ರಷ್ಟನ್ನು ಕಳೆಯುವುದು

**ಡಿ. ನೀರು ಪೂರೈಕೆ ಮತ್ತು ವಿದ್ಯುಚ್ಛಕ್ತಿ ವೆಚ್ಚಗಳು**

**ಇ. ಸವಕಳಿ**

(ಎ) ವಿಶೇಷ ಉಪಕರಣಗಳು ಮತ್ತು ಸ್ಥಾವರ
(ಬಿ) ವಾಹನಗಳು
(ಸಿ) ಕಟ್ಟಡಗಳು
(ಡಿ) ಇತರ ಬಾಬುಗಳು

**ಎಫ್. ವಿಶೇಷ ವೆಚ್ಚಗಳು**

(ಎ) ವಿಮೆ
(ಬಿ) ಜಾಹೀರಾತು
(ಸಿ) ಬಾಡಿಗೆಗಳು, ದರಗಳು ಮತ್ತು ತೆರಿಗೆಗಳು
(ಡಿ) ಮುದ್ರಣ ಮತ್ತು ಲೇಖನ ಸಾಮಗ್ರಿಗಳು
(ಇ) ಅಂಚೆ ವೆಚ್ಚ
(ಎಫ್) ಇತರೆ

**ಜಿ. ಮಂಡಳಿಯ ವೆಚ್ಚಗಳು**

(ಎ) ಪ್ರತಿಫಲ ಭತ್ಯೆಗಳು
(ಬಿ) ಪ್ರಯಾಣ ಭತ್ಯೆಗಳು

ಎಚ್. ಸಾಲಗಳು, ಡಿಬೆಂಚರುಗಳು, ಮುಂತಾದವುಗಳ ಮೇಲಿನ ಬಡ್ಡಿ

ಐ. ಹೊಸ ಸಾಲಗಳನ್ನು ಸಂಗ್ರಹಿಸುವುದಕ್ಕೆ / ಮತ್ತು ಡಿಬೆಂಚರುಗಳನ್ನು ನೀಡುವುದಕ್ಕೆ ಸಂಬಂಧಿಸಿದ ವೆಚ್ಚಗಳು

ಜೆ. ಸಂಕೀರ್ಣ

## ನಮೂನೆ 3 (ಮುಂದುವರಿದುದು)

## . . . . . . . . . ರಂದು ಇದ್ದಂತೆ ಕರ್ನಾಟಕ ಕೈಗಾರಿಕಾ ಪ್ರದೇಶಗಳ ಅಭಿವೃದ್ಧಿ ಮಂಡಳಿಯ ಆರ್ಥಿಕ ಸ್ಥಿತಿ ವಿವರಪಟ್ಟಿ

| | ಹೊಣೆಗಾರಿಕೆ | | ಆಸ್ತಿಗಳು |
|---|---|---|---|
| I | **ಭದ್ರತೆ ಸಹಿತ ಸಾಲಗಳು** ರೂ. | I | ನಿಗದಿತ ಆಸ್ತಿಗಳು (ಕೈಗಾರಿಕಾ ಪ್ರದೇಶದ ಹೆಸರು) ರೂ. |
| | (ಎ) ಬ್ಯಾಂಕುಗಳಿಂದ ಪಡೆದ ಸಾಲಗಳು | | ಕೈಗಾರಿಕಾ ಎಸ್ಟೇಟ್ |
| | (ಬಿ) ಡಿಬೆಂಚರುಗಳು, ನೋಟುಗಳು, ಭದ್ರತೆಗಳು, ಮುಂತಾದವುಗಳು | | 1. ಭೂಮಿ<br>2. ಕಟ್ಟಡಗಳು ಅನುಸೂಚಿಯ ಪ್ರಕಾರ |
| | (ಸಿ) ಇತರೆ | | 3. ರೈಲ್ವೇ ಸೈಡಿಂಗ್ಸ್ |
| II. | **ಭದ್ರತೆ ರಹಿತ ಸಾಲಗಳು** | II | (ಎ) ಕೈಗಾರಿಕಾ ಪ್ರದೇಶಗಳ ಮತ್ತು ಎಸ್ಟೇಟ್ ಗಳ ಅಭಿವೃದ್ಧಿ |
| | (ಎ) ರಾಜ್ಯಸರ್ಕಾರದಿಂದ ಸಾಲಗಳು ಮತ್ತು ಮುಂಗಡಗಳು | | (ಬಿ) ಇತರ ಯೋಜನೆಗಳ ಅಭಿವೃದ್ಧಿ |
| | (ಬಿ) ಬಹಿರಂಗ ಮಾರುಕಟ್ಟೆಯಲ್ಲಿ ಸಂಗ್ರಹಿಸಿದ ಸಾಲಗಳು | III | **ಹೂಡಿಕೆಗಳು** |
| | | | (ಎ) ಸರ್ಕಾರಿ ಭದ್ರತಾ ಪತ್ರಗಳು |
| | (ಸಿ) ಠೇವಣಿಗಳು | | (ಬಿ) ಇತರೆ |
| | (i) ಸಾರ್ವಜನಿಕರಿಂದ | | |
| | (ii) ಸರ್ಕಾರದಿಂದ | IV | **ಪ್ರಸ್ತುತ ಆಸ್ತಿಗಳು, ಸಾಲಗಳು ಮತ್ತು ಮುಂಗಡಗಳು** |
| | (ಡಿ) ನಗದು ಸಾಲಗಳು ಮತ್ತು ಓವರ್‌ಡ್ರಾಫ್ಟ್‌ಗಳು | (ಎ) | (1) ದಾಸ್ತಾನು ಮತ್ತು ಕಟ್ಟಡದ ಸಾಮಗ್ರಿಗಳು |
| | (ಇ) ಇತರೆ | | (2) ಬಿಡಿ ಉಪಕರಣಗಳು |
| | | | (3) ವಾಹನಗಳು |
| III. | **ಚಾಲ್ತಿ ಹೊಣೆಗಾರಿಕೆ** | | (4) ರಾಜ್ಯ ಸರ್ಕಾರದಿಂದ ಬಾಕಿಯಿರುವ ಮೊಬಲಗುಗಳು |
| | | | (5) ಚಿಲ್ಲರೆ ಸಾಲಗಾರರು |
| | 1. ಚಿಲ್ಲರೆ ಸಾಲಿಗರು | | (6) ವಸೂಲಾಗಬೇಕಾದ ಮುಂಗಡಗಳು (ಬಾಡಿಗೆಗಳು, ತೆರಿಗೆಗಳು, ವಿಮಾ ಹಣ ಮುಂತಾದವು) |
| | 2. ಮುಂಗಡವಾಗಿ ವಸೂಲು ಮಾಡಿದ ಬಾಡಿಗೆಗಳು | | |
| | 3. ಪ್ರಾಪ್ತವಾದ ಮತ್ತು ಬಾಕಿಯಿರುವ ಆದರೆ ಸಂದಾಯವಾಗದ ಬಡ್ಡಿ | | (7) ಹೂಡಿಕೆಗಳ ಮೇಲೆ ಬಂದ ಬಡ್ಡಿ<br>(8) ಕೈಯಲ್ಲಿರುವ ನಗದು |
| | 4. ಕರನಿರ್ಧರಣೆಗಾಗಿ ಏರ್ಪಾಟು | | (9) ಬ್ಯಾಂಕ್‌ನಲ್ಲಿರುವ ನಗದು |
| | 5. ಭವಿಷ್ಯ ನಿಧಿ | | |
| IV. | **ಮೀಸಲುಗಳು** | V. | **ಸಂಕೀರ್ಣ** |
| V. | **ನಿವ್ವಳ ಹೆಚ್ಚುವರಿ** | VI. | **ನಿವ್ವಳ ಕೊರತೆ** |
| | **ಒಟ್ಟು** | | **ಒಟ್ಟು** |

ಕರ್ನಾಟಕ ಸರ್ಕಾರ

ಸಂ. ಸಿಐ 319 ಎಸ್‌ಪಿಕ್ಯೂ 82.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 25ನೇ ಜನವರಿ 1984.

ಅಧಿಸೂಚನೆ

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿನಿಯಮ, 1966ರ 2(4) ನೇ ಪ್ರಕರಣದ ಅಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ರಾಜ್ಯದಲ್ಲಿನ ಮಂಡಲಿಯ ಎಲ್ಲ ಭೂ ಆರ್ಜನೆಗಳ ಸಂಬಂಧದಲ್ಲಿ ಕರ್ನಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿನಿಯಮ, 1966ರ ಅಡಿಯಲ್ಲಿ ಜಿಲ್ಲೆಯ ಡೆಪ್ಯೂಟಿ ಕಮೀಷನರುಗಳ ಅಧಿಕಾರಗಳನ್ನು ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶಗಳನ್ನು ಹೊರಡಿಸುವವರೆಗೆ ಕರ್ನಾಟಕ ಕೈಗಾರಿಕಾ ಪ್ರದೇಶಗಳ ಅಭಿವೃದ್ಧಿ ಮಂಡಲಿಯ ವಿಶೇಷ ಜಿಲ್ಲಾಧಿಕಾರಿಗೆ ಪ್ರತ್ಯಾಯೋಜಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ವೆಂಕಟಯ್ಯ,**
ಡೆಸ್ಕ್ ಅಧಿಕಾರಿ,
ವಾಣಿಜ್ಯ ಮತ್ತು ಕೈಗಾರಿಕೆಗಳ ಇಲಾಖೆ.

The above translation of the Karnataka Industrial Areas Development Act, 1966 (Karnataka Act 18 of 1966) and Karnataka Industrial Areas Development Rules, 1966 shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA
ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್. 860

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 29 ರಾಶಾಪ್ರ 2005, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2006**

ಕರ್ನಾಟಕ ಆರೋಗ್ಯ ಉಪಕರ ಅಧಿನಿಯಮ, 1962ರ(1962ರ 28) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ಆರೋಗ್ಯ ಉಪಕರ ಅಧಿನಿಯಮ, 1962

### ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು:**



### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**I**

**1962ರ ಅಧಿನಿಯಮ 28:-** ಮೈಸೂರು ಆರೋಗ್ಯ ಉಪಕರ ಅಧಿನಿಯಮ, 1951ರ ಉಪಬಂಧಗಳಿಗನುಸಾರವಾಗಿ, ಹಿಂದಿನ ಮೈಸೂರು ರಾಜ್ಯದ ಪ್ರದೇಶದಲ್ಲಿ ಭೂ ಕಂದಾಯದ ಎಲ್ಲಾ ಬಾಬುಗಳ ಮೇಲೆ ರೂಪಾಯಿಯಲ್ಲಿ ಅರ್ಧಾಣೆ ದರದಲ್ಲಿ ಆರೋಗ್ಯ ಉಪಕರವನ್ನು ವಿಧಿಸಲಾಗುತ್ತಿತ್ತು. ಅಧಿನಿಯಮದಲ್ಲಿ, ಕಂದಾಯದ ಇತರ ಬಾಬುಗಳ ಮೇಲೆ ಒಂದು ರೂಪಾಯಿಗೆ ಒಂದು ಆಣೆಯನ್ನು ಮೀರದಂತೆ ಉಪಕರ ವಿಧಿಸುವ ಉಪಬಂಧಗಳೂ ಇವೆ. ವಿಲೀನಗೊಂಡ ಬಾಂಬೆ, ಕೂರ್ಗ್, ಹೈದ್ರಾಬಾದ್ ಮತ್ತು ಮದ್ರಾಸ್ ಪ್ರದೇಶಗಳಲ್ಲಿ ಯಾವುದೇ ಆರೋಗ್ಯ ಉಪಕರವನ್ನು ವಿಧಿಸುತ್ತಿಲ್ಲ. ರಾಜ್ಯದ ಪ್ರಜೆಗಳಿಗೆ ಸಾಕಷ್ಟು ಆರೋಗ್ಯ ಸೇವೆಯನ್ನು ಒದಗಿಸಲು ಕಾರ್ಯಕ್ರಮವನ್ನು ಅನುಷ್ಠಾನಕ್ಕೆ ತರುವುದಕ್ಕಾಗಿ ಹೊಸ ಮೈಸೂರು ರಾಜ್ಯಾದ್ಯಂತ ಈ ಉಪಕರವನ್ನು ವಿಧಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಇಡೀ ರಾಜ್ಯಕ್ಕೆ ಅನ್ವಯಿಸುವಂಥ ಸೂಕ್ತ ಅಧಿನಿಯಮಿತಿಗಳನ್ನು ಮಾಡಿದ ಹೊರತು, ವಿಲೀನಗೊಂಡ ಪ್ರದೇಶಗಳಲ್ಲಿ ಯಾವುದೇ ಉಪಕರವನ್ನು ವಿಧಿಸುವಂತಿಲ್ಲ.

ಆದ್ದರಿಂದ ಈ ವಿಧೇಯಕ.

(ದಿನಾಂಕ 27ನೇ ಆಗಸ್ಟ್ 1962ರ ಕರ್ನಾಟಕ ರಾಜ್ಯ ಪತ್ರ (ವಿಶೇಷ ಸಂಚಿಕೆ) ಭಾಗ-IV-2 ಎ ದಲ್ಲಿ ಪುಟ 5 ರಲ್ಲಿ ಸಂಖ್ಯೆ 165ನ್ನು ಪ್ರಕಟಿಸಲಾಗಿದೆ).

II

**1968ರ ತಿದ್ದುಪಡಿ ಮಾಡುವ ಅಧಿನಿಯಮ 19:-** ನೀರಿನ ದರದ ಮೇಲೆ ಆರೋಗ್ಯ ಉಪಕರವನ್ನು ವಿಧಿಸುವುದಕ್ಕೆ ಸಂಬಂಧಪಟ್ಟ ಮೈಸೂರು ಆರೋಗ್ಯ ಉಪಕರ ಅಧಿನಿಯಮ,1962ರ (1962ರ ಮೈಸೂರು ಅಧಿನಿಯಮ 28) ಅನುಸೂಚಿ-ಎ ನ 1ನೇ ಬಾಬಿನ ವಿವರಣೆ ಮತ್ತು ಸದರಿ ಅನುಸೂಚಿಯ 2ನೇ ಬಾಬುಗಳನ್ನು ನ್ಯಾಯಾಲಯಗಳ ಕೆಲವು ತೀರ್ಪುಗಳಲ್ಲಿ ಅಸಿಂಧುವೆಂದು ಪರಿಗಣಿಸಲಾಗಿದೆ ಎತ್ತಿಹಿಡಿಯಲಾಗಿದೆ. ಇದನ್ನು ದೃಷ್ಟಿಯಲ್ಲಿರಿಸಿಕೊಂಡು, ಸದರಿ ಅನುಸೂಚಿಯಿಂದ ಅವುಗಳನ್ನು ಬಿಟ್ಟುಬಿಡುವುದೆಂದು ಉದ್ದೇಶಿಸಲಾಗಿದೆ. ಅನುಸೂಚಿ-'ಎ'ನ 3ನೇ ಬಾಬಿನ ಮೇರೆಗೆ ವಿಧಿಸಿದ ಆರೋಗ್ಯ ಉಪಕರವು ಚಲನಚಿತ್ರ ಪ್ರದರ್ಶನಗಳಿಗೆ ಮಾತ್ರವೆಂದು ಸ್ಪಷ್ಟಪಡಿಸಬೇಕೆಂದೂ ಉದ್ದೇಶಿಸಲಾಗಿದೆ. ಅಲ್ಲದೆ, ' ನಯಾ ಪೈಸೆ ' ಯ ಉಲ್ಲೇಖವನ್ನು ' ಪೈಸೆ 'ಯ ಅಭಿವ್ಯಕ್ತಿಯಲ್ಲಿ ಮಾಡಬೇಕೆಂದು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ದಿನಾಂಕ 26ನೇ ಏಪ್ರಿಲ್ 1968ರ ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗIV-2 ಎ ನ ಪುಟ 42 ರಲ್ಲಿನ ಸಂಖ್ಯೆ 698ರಲ್ಲಿ ಪ್ರಕಟಿಸಲಾಗಿದೆ).

III

**1976ರ ತಿದ್ದುಪಡಿ ಮಾಡುವ ಅಧಿನಿಯಮ33:-** ಪ್ರಸ್ತುತ ಒಂದು ರೂಪಾಯಿಗೆ 5 ಪೈಸೆಯಂತೆ ಶಿಕ್ಷಣ ಉಪಕರವನ್ನು ಮತ್ತು ಒಂದು ರೂಪಾಯಿಗೆ 9 ಪೈಸೆಯಂತೆ ಆರೋಗ್ಯ ಉಪಕರವನ್ನು, ಭೂ ಕಂದಾಯ, ಅಬಕಾರಿ ಸುಂಕ ಮತ್ತು ಮುನಿಸಿಪಾಲಿಟಿಗಳು ವಸೂಲು ಮಾಡುವ ಸ್ವತ್ತು ಹಾಗೂ ವೃತ್ತಿ ತೆರಿಗೆಗಳ ಮೇಲೆ ವಿಧಿಸಲಾಗಿದೆ.

ಸದರಿ ದರಗಳು ಬಹು ಹಿಂದೆ ನಿಗದಿಪಡಿಸಿದವುಗಳಾಗಿವೆ. ವಿಶೇಷವಾಗಿ, ಮಧ್ಯಾಹ್ನದ ಊಟದ ಮೂಲಕ ಶಾಲಾ ಮಕ್ಕಳಿಗೆ ಪೌಷ್ಠಿಕ ಆಹಾರ ನೀಡುವುದಕ್ಕೆ ಸಂಬಂಧಿಸಿದಂತೆ ಹೆಚ್ಚುತ್ತಿರುವ ವೆಚ್ಚಗಳನ್ನು ಭರಿಸಲು ಮತ್ತು ಗ್ರಾಮೀಣ ಪ್ರದೇಶದಲ್ಲಿ ಪ್ರಾಥಮಿಕ ಶಾಲಾ ಕಟ್ಟಡಗಳ ನಿರ್ಮಾಣದಂಥ ತೀವ್ರಗೊಳಿಸಬೇಕಾದ ಯೋಜನೆಗಳ ವೆಚ್ಚಗಳನ್ನು ಭರಿಸಲು ರಾಜ್ಯದ ವರಮಾನ ಹೆಚ್ಚಿಸುವ ಅಗತ್ಯವಿದೆ.

ಆದ್ದರಿಂದ, ಶಿಕ್ಷಣ ಉಪಕರ ಹಾಗೂ ಆರೋಗ್ಯ ಉಪಕರವನ್ನು ಹೆಚ್ಚಿಸುವುದಕ್ಕಾಗಿ, ಅನುಕ್ರಮವಾಗಿ, ಕರ್ನಾಟಕ ಕಡ್ಡಾಯ ಪ್ರಾಥಮಿಕ ಶಿಕ್ಷಣ ಅಧಿನಿಯಮ, 1961 ಮತ್ತು ಕರ್ನಾಟಕ ಆರೋಗ್ಯ ಉಪಕರ ಅಧಿನಿಯಮ, 1962ಕ್ಕೆ ತಿದ್ದುಪಡಿ ತರಬೇಕೆಂದು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ದಿನಾಂಕ 30ನೇ ಮಾರ್ಚ್, 1976ರ ಕರ್ನಾಟಕ ರಾಜ್ಯ ಪತ್ರ (ವಿಶೇಷ ಸಂಚಿಕೆ) ಭಾಗ IV-2 ಎ ದಲ್ಲಿ ಪುಟ 3 ರಲ್ಲಿ ಸಂಖ್ಯೆ 1743ನ್ನು ಪ್ರಕಟಿಸಲಾಗಿದೆ.)

1962ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 28

(1962ರ ಸೆಪ್ಟಂಬರ್ ಇಪ್ಪತ್ತೆರಡನೇ ದಿನಾಂಕದಂದು [1][ಕರ್ನಾಟಕ ರಾಜ್ಯ ಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ.)

## [1][ಕರ್ನಾಟಕ][1] ಆರೋಗ್ಯ ಉಪಕರ ಅಧಿನಿಯಮ, 1962

(1962ರ ಸೆಪ್ಟೆಂಬರ್ ಇಪ್ಪತ್ತೆರಡನೇ ದಿನದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ).

(ಕರ್ನಾಟಕ ಅಧಿನಿಯಮ 1968ರ 19 ಮತ್ತು 1976ರ 33 ಇವುಗಳಲ್ಲಿ ತಿದ್ದುಪಡಿಯಾದಂತೆ.)

[1]**[ಕರ್ನಾಟಕ ರಾಜ್ಯ]**[1] ದಲ್ಲಿ ಕಂದಾಯದ ಕೆಲವು ಬಾಬುಗಳ ಮೇಲೆ ಆರೋಗ್ಯ ಉಪಕರವನ್ನು ವಿಧಿಸುವುದಕ್ಕಾಗಿ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.

[1][ಕರ್ನಾಟಕ ರಾಜ್ಯ][1] ದಲ್ಲಿ ಕಂದಾಯದ ಕೆಲವು ಬಾಬುಗಳ ಮೇಲೆ ಆರೋಗ್ಯ ಉಪಕರವನ್ನು ವಿಧಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಹದಿಮೂರನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಿದೆ:-

**1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:-** (1) ಈ ಅಧಿನಿಯಮವನ್ನು [1][ಕರ್ನಾಟಕ][1] ಆರೋಗ್ಯ ಉಪಕರ ಅಧಿನಿಯಮ, 1962 ಎಂದು ಕರೆಯತಕ್ಕದ್ದು.

(2) ಇದು, ಇಡೀ [1][ಕರ್ನಾಟಕ ರಾಜ್ಯ][1] ಕ್ಕೆ ವ್ಯಾಪ್ತವಾಗತಕ್ಕದ್ದು.

(3) ಇದು, 1962ನೇ ಏಪ್ರಿಲ್ ಒಂದನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. ಪರಿಭಾಷೆಗಳು:-** ಈ ಅಧಿನಿಯಮದಲ್ಲಿ,-

(1) " ಸ್ಥಳೀಯ ಪ್ರಾಧಿಕಾರ " ಎಂದರೆ ನಗರಸಭೆ, ನಗರಸಭಾಸಮಿತಿ, ನಗರ ಸಮಿತಿ, ನಗರ ಪರಿಷತ್ತು, ಪೌರ ನಗರ ಪರಿಷತ್ತು, ನೈರ್ಮಲ್ಯ ಅಥವಾ ಪಟ್ಟಣಮಂಡಲಿ ಅಧಿಸೂಚಿತ ಪ್ರದೇಶ ಸಮಿತಿ, ತಾಲ್ಲೂಕು ಅಭಿವೃದ್ಧಿ ಮಂಡಳಿ, ಗ್ರಾಮ ಪಂಚಾಯತಿ ಅಥವಾ ಸ್ಥಳೀಯ ಸ್ವಯಂ ಸರ್ಕಾರ ಅಥವಾ ಗ್ರಾಮಾಡಳಿತದ ಉದ್ದೇಶಕ್ಕಾಗಿ ಸ್ಥಾಪಿತವಾದ ಯಾವುದೇ ಪ್ರಾಧಿಕಾರ;

(2) " ಅಧಿಸೂಚನೆ " ಎಂದರೆ ರಾಜಪತ್ರದಲ್ಲಿ ಪ್ರಕಟಿಸಲಾದ ಅಧಿಸೂಚನೆ.

**3. ಆರೋಗ್ಯ ಉಪಕರ ವಿಧಿಸುವುದು:-**

(i) ಭೂ ಕಂದಾಯದ ಎಲ್ಲಾ ಬಾಬುಗಳ ಮೇಲೆ;

(ii) ಅನುಸೂಚಿ 'ಎ' ಯಲ್ಲಿ ನಮೂದಿಸಲಾದ ರಾಜ್ಯ ವರಮಾನಗಳ ಬಾಬುಗಳ ಮೇಲೆ; ಮತ್ತು

(iii) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ಸ್ಥಳೀಯ ಪ್ರಾಧಿಕಾರವು ವಿಧಿಸುವಂಥ ಅನುಸೂಚಿ-ಬಿ ಯಲ್ಲಿ ನಮೂದಿಸಲಾದ ತೆರಿಗೆಗಳ ಬಾಬುಗಳ ಮೇಲೆ,

-ರೂಪಾಯಿಗೆ [2][ಹದಿನೈದು ಪೈಸೆ][2] ದರದಲ್ಲಿ ಆರೋಗ್ಯ ಉಪಕರವನ್ನು ವಿಧಿಸತಕ್ಕದ್ದು ಮತ್ತು ವಸೂಲು ಮಾಡತಕ್ಕದ್ದು.

**4. ಆರೋಗ್ಯ ಉಪಕರ ವಸೂಲಿ:-** 3ನೇ ಪ್ರಕರಣದ ಮೇರೆಗೆ ಸಂದಾಯಮಾಡಬೇಕಾದ ಆರೋಗ್ಯ ಉಪಕರವನ್ನು, ಅಂಥ ಕಂದಾಯವನ್ನು ವಿಧಿಸಬೇಕಾದ ಭೂ ಕಂದಾಯ, ರಾಜ್ಯ ಕಂದಾಯ ಅಥವಾ ತೆರಿಗೆಯ ಎಲ್ಲ ಬಾಬುಗಳೊಂದಿಗೆ ವಿಧಿಸತಕ್ಕದ್ದು, ನಿರ್ಧರಿಸತಕ್ಕದ್ದು ಮತ್ತು ವಸೂಲು ಮಾಡತಕ್ಕದ್ದು ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನ ಉಪಬಂಧಗಳು ಮತ್ತು ಅದರ ಮೇರೆಗೆ ರಚಿಸಲಾದ ಅಥವಾ ಹೊರಡಿಸಲಾದ ನಿಯಮಗಳು, ಆದೇಶಗಳು, ಅಧಿಸೂಚನೆಗಳು, ಭೂ ಕಂದಾಯ, ರಾಜ್ಯ ವರಮಾನ ಅಥವಾ ತೆರಿಗೆಯ ಸದರಿ ಬಾಬುಗಳ ಸಂಬಂಧದಲ್ಲಿ ಕರ ವಿಧಿಸುವುದಕ್ಕೆ, ನಿರ್ಧರಿಸುವುದಕ್ಕೆ ಮತ್ತು ವಸೂಲು ಮಾಡುವುದಕ್ಕೆ ಸಂಬಂಧಿಸಿದಂತೆ ಅವು ಅನ್ವಯವಾಗುವಂತೆಯೇ ಆರೋಗ್ಯ ಉಪಕರವನ್ನು ವಿಧಿಸುವುದಕ್ಕೆ, ನಿರ್ಧರಿಸುವುದಕ್ಕೆ ಮತ್ತು ವಸೂಲು ಮಾಡುವುದಕ್ಕೆ ಅನ್ವಯಿಸತಕ್ಕದ್ದು.

1. ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶ, 1973ರ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

2. 1976ರ ಅಧಿನಿಯಮ 33ರ ಮೂಲಕ 1.4.1976ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

[1][**4ಎ. ಆರೋಗ್ಯ ಉಪಕರದ ವಸೂಲಿಗೆ ತಗಲುವ ಖರ್ಚಿನ ಬಗ್ಗೆ ಹಕ್ಕುಳ್ಳ ಸ್ಥಳೀಯ ಪ್ರಾಧಿಕಾರಗಳು:-** ಈ ಅಧಿನಿಯಮದ ಮೇರೆಗೆ ಆರೋಗ್ಯ ಉಪಕರವನ್ನು ಸ್ಥಳೀಯ ಪ್ರಾಧಿಕಾರವು ವಸೂಲು ಮಾಡಿದಲ್ಲಿ, ಅಂಥ ಸ್ಥಳೀಯ ಪ್ರಾಧಿಕಾರವು ವಸೂಲಾದ ಹಣದ ಶೇಕಡಾ ಹತ್ತರಷ್ಟು ಮೊತ್ತವನ್ನು ವಸೂಲಿಗೆ ತಗುಲಿದ ಖರ್ಚಿಗಾಗಿ ಕಡಿತಗೊಳಿಸಲು ಹಕ್ಕುಳ್ಳದ್ದಾಗಿರತಕ್ಕದ್ದು ಮತ್ತು ಉಳಿದ ಹಣವನ್ನು ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡತಕ್ಕದ್ದು.][1]

**5. [2][ಪೈಸೆಗೆ][2] ಹತ್ತಿರವಾಗಿ ಉಪಕರವನ್ನು ವಸೂಲು ಮಾಡುವುದು:-** ಈ ಅಧಿನಿಯಮದ ಮೇರೆಗೆ ಸಂದಾಯ ಮಾಡಬೇಕಾದ ಆರೋಗ್ಯ ಉಪಕರದ ಹಣವನ್ನು ನಿರ್ಧರಿಸುವಲ್ಲಿ, ಅರ್ಧ [2][ಪೈಸೆ][2] ಗಿಂತ ಕಡಿಮೆಯಿರುವ [1][ಪೈಸೆ][1] ಯ ಭಾಗವನ್ನು ಪರಿಗಣಿಸತಕ್ಕದ್ದಲ್ಲ ಮತ್ತು [2][ಪೈಸೆ][2]ಯ ಭಾಗವನ್ನು ಅಥವಾ ಅರ್ಧ ಪೈಸೆಗೆ ಸಮನಾದ ಅಥವಾ ಅರ್ಧ [2][ಪೈಸೆ][2] ಯನ್ನು ಮೀರಿದ ಭಾಗವನ್ನು ಒಂದು [2][ಪೈಸೆ][2] ಯಂತೆ ಪರಿಗಣಿಸತಕ್ಕದ್ದು.

**6. ಇತರ ಅಧಿನಿಯಮಗಳ ಮೇರೆಗೆ ವಿಧಿಸಿದ ಉಪಕರ ಬಾಧಕವಾಗದಿರುವುದು:-** ಈ ಅಧಿನಿಯಮದಲ್ಲಿರುವುದು ಯಾವುದೂ, ಇತರ ಯಾವುದೇ ಅಧಿನಿಯಮದ ಉಪಬಂಧಗಳ ಕಾರ್ಯಾಚರಣೆಗೆ ಬಾಧಕವಾಗತಕ್ಕದ್ದಲ್ಲ ಮತ್ತು ಈ ಅಧಿನಿಯಮದ ಮೇರೆಗೆ ವಿಧಿಸಿದ ಆರೋಗ್ಯ ಉಪಕರವು ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಮೇರೆಗೆ ವಿಧಿಸಬಹುದಾದ ಇತರ ಯಾವುದೇ ಕರ ಅಥವಾ ಉಪಕರಕ್ಕೆ ಪೂರಕವಾಗಿರತಕ್ಕದ್ದು ಮತ್ತು ಅದರ ಬದಲಿಗೆ ಇರತಕ್ಕದ್ದಲ್ಲ.

**7. ನಿಯಮಗಳ ರಚನಾಧಿಕಾರ:-** (1) ರಾಜ್ಯ ಸರ್ಕಾರವು ಅಧಿಸೂಚನೆ ಮೂಲಕ, ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯರೂಪಕ್ಕೆ ತರುವ ಉದ್ದೇಶಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಮೇರೆಗೆ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನ ಅಥವಾ ಎರಡು ನಿಕಟೋತ್ತರ ಅಧಿವೇಶನದಲ್ಲಿ ಅಡಕಗೊಳ್ಳಬಹುದಾದ ಒಟ್ಟು ಮುವತ್ತು ದಿನಗಳ ಅವಧಿಯವರೆಗೆ ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಇದನ್ನು ಹಾಗೆ ಮಂಡಿಸಲಾದ ಅಧಿವೇಶನ ಅಥವಾ ನಿಕಟೋತ್ತರದ ಅಧಿವೇಶನದ ಮುಕ್ತಾಯಕ್ಕೆ ಮೊದಲು, ಯಾವುದೇ ಮಾರ್ಪಾಡುಗಳನ್ನು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಸದರಿ ನಿಯಮಗಳನ್ನು ಆ ತರುವಾಯ ರಚಿಸಬಾರದೆಂದು ಒಪ್ಪಿದರೆ, ಆ ತರುವಾಯ, ಆ ನಿಯಮವು ಅಂಥ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಜಾರಿಗೆ ತರತಕ್ಕದ್ದು ಅಥವಾ ಸಂದರ್ಭಾನುಸಾರ ಜಾರಿಗೆ ತರತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆ ಹಿಂದೆ ಮಾಡಿದ ಯಾವುದೇ ಕೃತ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

**8. ನಿರಸನ:-** ಮೈಸೂರು ಆರೋಗ್ಯ ಉಪಕರ ಅಧಿನಿಯಮ, 1951 (1951ರ ಮೈಸೂರು ಅಧಿನಿಯಮ ಸಂಖ್ಯೆ-XVIII)ಇದನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

**ಅನುಸೂಚಿ-ಎ**

1. ರಾಜ್ಯದಲ್ಲಿ ತಯಾರಿಸಿದ ಅಥವಾ ಉತ್ಪಾದಿಸಿದ ಈ ಕೆಳಗಿನ ಸರಕುಗಳ ಮೇಲೆ ರಾಜ್ಯದ ಯಾವುದೇ ಪ್ರದೇಶದಲ್ಲಿ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ರಾಜ್ಯವು ವಿಧಿಸಬಹುದಾದ ಅಬಕಾರಿ ಸುಂಕ ಮತ್ತು ಇತರೆಡೆಯಲ್ಲಿ ತಯಾರಿಸಲಾದ ಅಥವಾ ಉತ್ಪಾದಿಸಲಾದ ಅಂಥವೇ ಸರಕುಗಳ ಮೇಲೆ ವಿಧಿಸಬಹುದಾದ ಪ್ರತಿಸುಂಕ:-

(ಎ) ಮಾನವ ಬಳಕೆಗಾಗಿ ಮದ್ಯಸಾರದ ಪಾನೀಯಗಳು.

(ಬಿ) ಅಫೀಮು, ಭಾರತೀಯ ಗಾಂಜಾ ಮತ್ತು ಇತರೆ ಮಂಪರು ತರಿಸುವ ಔಷಧಗಳು ಮತ್ತು ನಿದ್ರಾಜನಕಗಳು.

[3][ವಿವರಣೆ x x x ][3]

[3][2. x x x][3]

3. [4][ [5][ಕರ್ನಾಟಕ][5] ಮನರಂಜನಾ ತೆರಿಗೆ ಅಧಿನಿಯಮ, 1958ರ 4ನೇ ಪ್ರಕರಣದ ಮೇರೆಗೆ][4] ಚಲನ ಚಿತ್ರ ಪ್ರದರ್ಶನಗಳ ಮೇಲೆ ರಾಜ್ಯವು ವಿಧಿಸಬಹುದಾದ ತೆರಿಗೆ.

**ಅನುಸೂಚಿ-ಬಿ**

ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ಸ್ಥಳೀಯ ಪ್ರಾಧಿಕಾರಗಳು ವಿಧಿಸಬಹುದಾದ ತೆರಿಗೆಗಳು ಈ ಕೆಳಗಿನಂತಿವೆ, ಎಂದರೆ:-

1. ಭೂಮಿಗಳ ಮತ್ತು ಕಟ್ಟಡಗಳ ಮೇಲಿನ ತೆರಿಗೆಗಳು.

2. ವಾಹನಗಳ ಮೇಲಿನ ತೆರಿಗೆಗಳು.

[6][3. x x x ][6]

[7][3][7] ಜಾಹೀರಾತಿನ ಮೇಲಿನ ತೆರಿಗೆಗಳು.

The above translation of the Karnataka Health Cess Act, 1962 (Karnataka Act 28 of 1962) shall be authoritative text in the Kannada (Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

1. 1968ರ ಅಧಿನಿಯಮ 19ರ ಮೂಲಕ 7.11.1968ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
2. 1968ರ ಅಧಿನಿಯಮ 19ರ ಮೂಲಕ 7.11.1968ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1968ರ ಅಧಿನಿಯಮ ಸಂಖ್ಯೆ 19ರ ಮೂಲಕ 7.11.1968ರಿಂದ ಜಾರಿಗೆ ಬರುವಂತೆ ಲೋಪಿಸಲಾಗಿದೆ.
4. 1968ರ ಅಧಿನಿಯಮ ಸಂಖ್ಯೆ 19ರ ಮೂಲಕ 1.4.1962ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
5. 1973ರ ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶದ ಮೂಲಕ 1.11.1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
6. 1976ರ ಅಧಿನಿಯಮ ಸಂಖ್ಯೆ 33ರ ಮೂಲಕ 1.4.1976ರಿಂದ ಜಾರಿಗೆ ಬರುವಂತೆ ಲೋಪಿಸಲಾಗಿದೆ.
7. 1976ರ ಅಧಿನಿಯಮ ಸಂಖ್ಯೆ 33ರ ಮೂಲಕ 1.4.1976ರಿಂದ ಜಾರಿಗೆ ಬರುವಂತೆ ಪ್ರತಿ ಸಂಖ್ಯೆ ನೀಡಲಾಗಿದೆ.

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 28 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 8ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಧಾರವಾಡ ಜಿಲ್ಲಾ ಮತ್ತು ತಾಲ್ಲೂಕಿನ ಮನಗುಂಡಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಮನಗುಂಡಿ ಇದರ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಸೋಮಶೇಖರ ಶಿವಬಸಪ್ಪ ಗಜಪತಿ
2. ಶ್ರೀ ಶ್ರೀಕಾಂತ ದುರ್ಗಪ್ಪ ದೊಡ್ಡಮನಿ
3. ಶ್ರೀಮತಿ ಬಸವ್ವ ಶಿವಪ್ಪ ಹುಂಬೇರಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 820

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಸಾಇ 345 ಪಿಎಂಎಸ್ 2004, ಬೆಂಗಳೂರು, ದಿನಾಂಕ: 1ನೇ ಏಪ್ರಿಲ್ 2006**

1872 ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ ಕಾಯಿದೆಯ 6 ಮತ್ತು 9ನೇ ಕಲಂನಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ (ಕರ್ನಾಟಕ) ನಿಯಮಗಳು 1961 ರಂತೆ ಕಾರ್ಯನಿರ್ವಹಿಸಲು ಪಾಸ್ಟರ್ ವೈ. ದಾಸ್, ಇಂಡಿಯನ್ ಇಂಡಿಪೆಂಡೆಂಟ್ ಬ್ಯಾಪ್ಟಿಸ್ಟ್ ಚರ್ಚ್, ನಂ.99, 2ನೇ ಬ್ಯಾಟರಿ ಪೆನ್ಲನ್ಸ್ ಲೇನ್, ವಿವೇಕನಗರ, ಬೆಂಗಳೂರು-47 ಇವರಿಗೆ ಮೇಲಿನ ಕಾಯ್ದೆಯಡಿಯಲ್ಲಿ ಕರ್ನಾಟಕದಲ್ಲಿ ವಿವಾಹ ವಿಧಿಯನ್ನು ನೆರವೇರಿಸಲು ಸದರಿ ಕಾಯ್ದೆಯಡಿಯಲ್ಲಿ ಸೂಚಿಸಲಾದ ಷರತ್ತುಗಳನ್ನು ಪೂರೈಸುವ ಷರತ್ತಿಗೊಳಪಟ್ಟು ಅನುಮತಿಯನ್ನು ಈ ಮೂಲಕ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಪಿ.ಆರ್. 833

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ರಹದಾರಿ ಮತ್ತು ವಿದೇಶಿಯರು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಆಕುಕ 42 ಎಂಎಸ್‌ಎಫ್ 2006, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2006**

ಕರ್ನಾಟಕ ಅನಾಟಮಿ ಆಕ್ಟ್ 1957ರ ಪ್ರಕಾರ ಕೆಳಕಂಡ ಮೆಡಿಕಲ್ ಕಾಲೇಜ್‌ನ್ನು ರಿಜಿಸ್ಟ್ರೇಷನ್ ಮಾಡಲಾಗಿದೆ.

ರಾಜರಾಜೇಶ್ವರಿ ಮೆಡಿಕಲ್ ಕಾಲೇಜು,
ಕಂಬಿಪುರ, ಮೈಸೂರು ರಸ್ತೆ,
ಕೆಂಗೇರಿ ಹೋಬಳಿ,
ಬೆಂಗಳೂರು-560 074

ಕರ್ನಾಟಕ ಅನಾಟಮಿ ಆ್ಯಕ್ಟ್ 1957ರ ಸೆಕ್ಷನ್ 3 ರನ್ವಯ ಮೇಲ್ಕಂಡ ಕಾಲೇಜಿನ ಅನಾಟಮಿ ವಿಭಾಗದ ಪ್ರಾಧ್ಯಾಪಕರನ್ನು ಅಧಿಕೃತಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 834

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

## ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ನ.ಅ.ಇ. 28 ಎಂ.ಎಲ್.ಆರ್. 2006 (B-1), ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2006**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣದ 11(1b) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಬ್ಯಾಡಗಿ ಪುರಸಭೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಬಸವರಾಜ ಶಿವಪ್ಪ ಸಂಕಣ್ಣನವರ ಶೆಟ್ಟರ ಓಣಿ, ಬ್ಯಾಡಗಿ
2. ಶ್ರೀ ಕೃಷ್ಣಪ್ಪ ಗೋಣೆಪ್ಪ ಉಜನಿ, ಉಜನಿಯವರ ಓಣಿ, ಬ್ಯಾಡಗಿ
3. ಶ್ರೀ ಹೊನ್ನೂರಪ್ಪ, ಫಕೀರಪ್ಪ ಕಾಡಸಾಲಿ, ವಾಲ್ಮೀಕಿ ನಗರ, ಬ್ಯಾಡಗಿ
4. ಶ್ರೀಮತಿ ನಾಗವ್ವ ಯವನೂರಪ್ಪ ಸುಣಗಾರ, ತಳವಾರ ಓಣಿ, ಬ್ಯಾಡಗಿ
5. ಶ್ರೀ ಸೋಮಣ್ಣ ಗೊಣ್ಣೆಪ್ಪ ಮಾಳಗಿ, ಗಾಂಧಿನಗರ, ಬ್ಯಾಡಗಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 835

**ಲಕ್ಷ್ಮಿನರಸಿಂಹಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ನಗರಾಭಿವೃದ್ಧಿ ಇಲಾಖೆ.